# ವೈದೇಹಿಯವರ ಸಣ್ಣ ಕತೆಗಳಲ್ಲಿ ಸ್ತ್ರೀಲೋಕ

ಕನ್ನಡ ವಿಶ್ವವಿದ್ಯಾಲಯ, ಹಂಪಿಗೆ

ಎಂ.ಫಿಲ್ ಪದವಿಗಾಗಿ ಸಾದರಪಡಿಸಿದ ಸಂಪ್ರಬಂಧ


ಸಂಶೋಧಕಿ

ವಾಹಿನಿ ವಿ.ಕೆ.

ಮಾರ್ಗದರ್ಶಕರು

ಡಾ.ಪಿ.ನರಸಿಂಹ ಮಯ್ಯ



೨೦೧೧

ಕರ್ನಾಟಕ ಥಿಯೋಲಾಜಿಕಲ್ ಸಂಶೋಧನಾ ಕೇಂದ್ರ

ಬಲ್ಮಠ, ಮಂಗಳೂರು

# ವೈದೇಹಿಯವರ ಸಣ್ಣ ಕತೆಗಳಲ್ಲಿ ಸ್ತ್ರೀಲೋಕ

ಕನ್ನಡ ವಿಶ್ವವಿದ್ಯಾಲಯ, ಹಂಪಿಗೆ

ಎಂ.ಫಿಲ್ ಪದವಿಗಾಗಿ ಸಾದರಪಡಿಸಿದ ಸಂಪ್ರಬಂಧ

ಸಂಶೋಧಕಿ

ವಾಹಿನಿ ವಿ.ಸಿ.



ಮಾರ್ಗದರ್ಶಕರು

ಡಾ.ಪಿ.ನರಸಿಂಹ ಮಯ್ಯ

೨೦೧೧

ಕರ್ನಾಟಕ ಥಿಯೋಲಾಜಿಕಲ್ ಸಂಶೋಧನಾ ಕೇಂದ್ರ

ಬಲ್ಮಠ, ಮಂಗಳೂರು

# ಯೋಗ್ಯತಾ ಪ್ರತ

ವಾಹಿನಿ ವಿ.ಸಿ. ಅವರು ನನ್ನ ಸಲಹೆ ಮತ್ತು ಮಾರ್ಗದರ್ಶನದಲ್ಲಿ **'ವೈದೇಹಿಯವರ ಸಣ್ಣ ಕತೆಗಳಲ್ಲಿ ಸ್ತ್ರೀಲೋಕ'**- ಎಂಬ ಶೀರ್ಷಿಕೆಯ ಈ ಸಂಪ್ರಬಂಧವನ್ನು ಎಂ.ಫಿಲ್ ಪದವಿ ಪ್ರಾಪ್ತಿಗಾಗಿ ಕನ್ನಡ ವಿಶ್ವವಿದ್ಯಾಲಯ, ಹಂಪಿಗೆ ಸಲ್ಲಿಸಬೇಕೆಂದು ಸಿದ್ಧಪಡಿಸಿದ್ದಾರೆ. ಈ ಸಂಪ್ರಬಂಧವು ಸಂಶೋಧಕಿಯ ಸ್ವಂತ ಪರಿಶ್ರಮ, ಅಭಿಪ್ರಾಯ ಸಂಗ್ರಹ, ಬೋಧನೆ ಮತ್ತು ಸಂಶೋಧನೆಯ ಫಲಸ್ವರೂಪವಾಗಿದೆ. ಇವರು ಸಂಪ್ರಬಂಧದ ವಿಷಯವನ್ನು ಅಥವಾ ಇದರ ಯಾವುದೇ ಭಾಗವನ್ನು ಈ ಮೊದಲು ಯಾವುದೇ ಪದವಿಗಾಗಲಿ ಅಥವಾ ಇನ್ನಿತರ ಉದ್ದೇಶಗಳಿಗಾಗಿಯಾಗಲಿ ಬಳಸಿಕೊಂಡಿಲ್ಲ.



ಕರ್ನಾಟಕ ಥಿಯೋಲಾಜಿಕಲ್ ಸಂಶೋಧನಾ ಕೇಂದ್ರ
ಬಲ್ಮಠ, ಮಂಗಳೂರು.

ಡಾ.ಪಿ.ನರಸಿಂಹ ಮಯ್ಯ
ಸಂಶೋಧನಾ ಮಾರ್ಗದರ್ಶಕರು

# ಪ್ರಮಾಣ ಪತ್ರ

ಕನ್ನಡ ವಿಶ್ವವಿದ್ಯಾಲಯ, ಹಂಪಿಗೆ ಎಂ.ಫಿಲ್ ಪದವಿಗಾಗಿ ಸಾದರಪಡಿಸಿದ **'ವೈದೇಹಿಯವರ ಸಣ್ಣ ಕತೆಗಳಲ್ಲಿ ಸ್ತ್ರೀಲೋಕ'** ಎಂಬ ಶೀರ್ಷಿಕೆಯ ಈ ಸಂಪ್ರಬಂಧವು ಈ ಸಂಶೋಧಕಿಯ ಸ್ವತಂತ್ರ ಕೃತಿಯಾಗಿದ್ದು ವಿಶ್ಲೇಷಣೆ ಮತ್ತು ಅಧ್ಯಯನದ ಫಲೋದಯವಾಗಿದೆ. ಮಂಗಳೂರಿನ ಕರ್ನಾಟಕ ಥಿಯೋಲಾಜಿಕಲ್ ಸಂಶೋಧನಾ ಕೇಂದ್ರದಲ್ಲಿ ಡಾ.ಪಿ.ನರಸಿಂಹ ಮಯ್ಯ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ ಈ ಸಂಪ್ರಬಂಧವನ್ನು ಬೇರಾವುದೇ ಪದವಿ, ಡಿಪ್ಲೋಮ ಅಥವಾ ತತ್ಸಮಾನ ಉಪಾಧಿಗಳ ಪ್ರಾಪ್ತಿಗಾಗಿ ಅಥವಾ ಆರ್ಥಿಕ ಲಾಭಕ್ಕಾಗಿ ಇಡಿಯಾಗಿ ಅಥವಾ ಬಿಡಿಯಾಗಿ ಬಳಸಿಕೊಂಡಿಲ್ಲವೆಂದು ನಾನು ಈ ಮೂಲಕ ದೃಢಪಡಿಸುತ್ತೇನೆ.

ಕರ್ನಾಟಕ ಥಿಯೋಲಾಜಿಕಲ್ ಸಂಶೋಧನಾ ಕೇಂದ್ರ
ಬಲ್ಮಠ, ಮಂಗಳೂರು.

ವಾಹಿನಿ ವಿ.ಸಿ.

# ವೈದೇಹಿಯವರ ಸಣ್ಣ ಕತೆಗಳಲ್ಲಿ ಸ್ತ್ರೀಲೋಕ

## ಅಧ್ಯಾಯ ವಿವರಗಳು

# ೧ : ಅಧ್ಯಯನದ ಉದ್ದೇಶ, ಸ್ವರೂಪ, ವ್ಯಾಪ್ತಿ

೧.೧ ಪ್ರಸ್ತಾವನೆ

೧.೨ ಅಧ್ಯಯನದ ಉದ್ದೇಶ ಮತ್ತು ಸ್ವರೂಪ

೧.೩ ಅಧ್ಯಯನದ ವ್ಯಾಪ್ತಿ

೧.೪ ಹಿಂದಣ ಅಧ್ಯಯನದ ಹೆಜ್ಜೆಗಳು

# ೧. ಅಧ್ಯಯನದ ಉದ್ದೇಶ, ಸ್ವರೂಪ, ವ್ಯಾಪ್ತಿ

## ೧.೧ ಪ್ರಸ್ತಾವನೆ:

ವೈದೇಹಿ ಕನ್ನಡದ ವಿಶಿಷ್ಟ ಬರಹಗಾರ್ತಿಯರಲ್ಲಿ ಒಬ್ಬರು. ಹೊಸಗನ್ನಡ ಸಾಹಿತ್ಯದ ಪ್ರಮುಖ ಬರಹಗಾರರ ಸಾಲಿನಲ್ಲಿ ತಮ್ಮದೇ ಆದ ಬರಹದ ನವಿರುತನದಿಂದ ಗುರುತಿಸಲ್ಪಟ್ಟವರು ವೈದೇಹಿ.

ಹೊಸಗನ್ನಡ ಸಾಹಿತ್ಯದ ವಿವಿಧ ಪ್ರಕಾರಗಳಾದ ಸಣ್ಣಕತೆ, ಕಾದಂಬರಿ, ಮಕ್ಕಳ ಸಾಹಿತ್ಯ, ಕಾವ್ಯ ಮೊದಲಾದ ಕ್ಷೇತ್ರಗಳಲ್ಲಿ ಉತ್ಕೃಷ್ಟ ಬರಹಗಳನ್ನು ನೀಡಿದ್ದಾರೆ. ಹೀಗಿದ್ದೂ ಕಥಾ ಪ್ರಕಾರದಲ್ಲಿ ವೈದೇಹಿಯವರ ಸೃಜನಸಾಮರ್ಥ್ಯ ವಿಶಿಷ್ಟ ರೂಪದಲ್ಲಿ ಮೂಡಿ ಬಂದಿದೆ. ಕತೆಗಳಲ್ಲಿ ಅನುಭವ ಸಮೃದ್ಧಿ, ಭಾವಪುಷ್ಟಿ ಕತೆಗಳನ್ನು ಹೆಣೆಯುವ ಸೂಕ್ಷ್ಮ ಕುಸುರಿ ಕೆಲಸ ಭಾಷೆಯ ಲವಲವಿಕೆಯಿಂದಾಗಿ ವಿಶಿಷ್ಟ ಪರಿಣಾಮವನ್ನು ಬೀರಿದ್ದಾರೆ. ಕನ್ನಡದ ಇಂತಹ ಸಮರ್ಥ ಕತೆಗಾರ್ತಿಯರಲ್ಲಿ ಒಬ್ಬರಾಗಿರುವ ವೈದೇಹಿ ಕುರಿತಂತೆ ಹಲವು ನೆಲೆಯ ಅಧ್ಯಯನಗಳು ನಡೆದಿವೆ. ಸಮಕಾಲೀನ ಮಹಿಳಾ ಬರಹಗಾರ್ತಿಯರಾದ ವೀಣಾಶಾಂತೇಶ್ವರ, ನೇಮಿಚಂದ್ರ, ಸಾರಾಅಬೂಬಕ್ಕರ್, ಭಾಗೀರಥಿ ಹೆಗ್ಡೆ ಮೊದಲಾದ ಲೇಖಕಿಯರಿಗಿಂತ ಸದಾ ಪಾತ್ರದ ಮೂಲಕ ವಿಶಿಷ್ಟ ಅನುಭವವನ್ನು ಕೊಡುವ ವೈದೇಹಿ ಬೇರೆಯಾಗಿಯೇ ನಿಲ್ಲುತ್ತಾರೆ. ಕಥಾಪ್ರಕಾರದಲ್ಲಿ ವೈದೇಹಿ ಸಾಧಿಸಿರುವ ಸಿದ್ಧಿ ಬಹಳ ಮೇಲ್ಮಟ್ಟದ್ದು. ಮಾನವ ಸಂಬಂಧಗಳ ನಡುವಿನ ನೆಮ್ಮದಿ ಗೊಂದಲಗಳನ್ನು ಒಟ್ಟಿಗೆ ಅಭಿವ್ಯಕ್ತಿಸುವ ಸಮರ್ಥ ಕಥೆಗಾರರಿವರು.

ಕನ್ನಡದ ಪ್ರಮುಖ ಮಹಿಳಾ ಬರಹಗಾರ್ತಿಯಾದ ವೈದೇಹಿ ಪರವಾದ ದೃಷ್ಟಿಕೋನವನ್ನು ತಮ್ಮ ಬಹುತೇಕ ಕತೆಗಳಲ್ಲಿ ಸಮರ್ಪಕವಾಗಿ ನಿರೂಪಿಸಿದ್ದಾರೆ. ಆದರೆ ಈ ಮಹಿಳಾ ಪರವಾದ ದೃಷ್ಟಿಕೋನ ಎಲ್ಲೂ ಕೂಡ ಕೃತಕವಾಗಿ ಒತ್ತಾಯಪೂರ್ವಕವಾಗಿ ಬಾರದೆ ಕತೆಯ ಸಂದರ್ಭ, ಸನ್ನಿವೇಶಗಳಿಗೆ ಅನುಗುಣವಾಗಿ ನಿರೂಪಿಸುವುದೇ ವೈದೇಹಿಯವರ ಹೆಚ್ಚುಗಾರಿಕೆ.

ವೈದೇಹಿಯವರ ಕತೆಗಳಲ್ಲಿ ವೈಚಾರಿಕತೆ ಎನ್ನುವುದು ಅಪಕ್ವವಾದವಾಗಿ ಬಾರದೆ ಆಯಾ ಪಾತ್ರಗಳನ್ನು, ಪಾತ್ರದ ಸ್ವಭಾವಗಳನ್ನು ಸಂದರ್ಭ ಘಟನೆಗಳನ್ನು ವಿವರವಾಗಿ ನೀಡುತ್ತಲೇ ಇನ್ನೊಂದು ಸಮಾಜದಲ್ಲಿ ಅಸ್ತಿತ್ವದಲ್ಲಿರುವ ಕ್ರೌರ್ಯದ ಕಡೆ ಬೆಳಕು ಚೆಲ್ಲುವ ಪ್ರಯತ್ನವನ್ನು ಮಾಡುತ್ತಾರೆ.

## ೧.೨ ಅಧ್ಯಯನದ ಉದ್ದೇಶ ಮತ್ತು ಸ್ವರೂಪ:

ಕನ್ನಡದ ಅಗ್ರಮಾನ್ಯ ಕತೆಗಾರ್ತಿಯರಲ್ಲಿ ಓರ್ವರಾದ ವೈದೇಹಿ ಬಹು ಪ್ರಕಾರಗಳಲ್ಲಿ ತೊಡಗಿಸಿಕೊಂಡರೂ ಕತೆಗಾರ್ತಿಯಾಗಿ ಗಟ್ಟಿಯಾಗಿ ಗುರುತಿಸಲ್ಪಟ್ಟವರು. ತನ್ನ ಅನುಭವಜನ್ಯವಾದ ಸುತ್ತಲಿನ ಪರಿಸರವನ್ನು ಸೂಕ್ಷ್ಮವಾಗಿ ಗಮನಿಸುವ ಕತೆಗಾರ್ತಿ, ಪಾತ್ರಗಳ ಮೂಲಕ ಹೊಸತನದ ಜೀವನವನ್ನು ತುಂಬುತ್ತಾರೆ. ಯಾವುದೇ ವೈಚಾರಿಕತೆಯನ್ನು ಬದ್ಧತೆಯ ಮಟ್ಟದಲ್ಲಿ ಆರೋಪಿಸಿಕೊಳ್ಳದೆ, ಪಾತ್ರವೊಂದು ಮುಕ್ತವಾಗಿಯೇ ತನ್ನನ್ನು ನಿರ್ವಹಿಸಿಕೊಳ್ಳುವ ಸ್ವಾತಂತ್ರ್ಯ ಇವರ ಕತೆಗಳಲ್ಲಿದೆ. ಭಾಷೆಯ ನೆಲೆಯಿಂದ ಕುಂದಾಪುರ ಪರಿಸರದ ಕೋಟ ಕನ್ನಡವನ್ನು ತನ್ನ ಸಮಗ್ರ ಅಭಿವ್ಯಕ್ತಿಯ ಶಕ್ತಿಯಾಗಿ ಪರಿವರ್ತಿಸಿಕೊಂಡಿದ್ದಾರೆ. ಹಾಗಾಗಿ ಭಾಷೆಯ ನೆಲೆಯಿಂದ ಇವರ ಕತೆಗಳು ಹೆಚ್ಚು ಗ್ರಾಮ್ಯವೂ ಹಳ್ಳಿಯ ಪಾತ್ರದ ಮೂಲಕ ಆಪ್ಯಾಯಮಾನವಾಗಿಯೂ ಕಾಣಿಸಿಕೊಳ್ಳುತ್ತದೆ.

ಈಗಾಗಲೇ ವೈದೇಹಿ ಕತೆ, ಕಾದಂಬರಿ, ಕವಿತೆ, ಮಕ್ಕಳ ಸಾಹಿತ್ಯವನ್ನು ಸಮಗ್ರವಾಗಿಟ್ಟುಕೊಂಡು ಅಧ್ಯಯನಗಳು ನಡೆದಿರುತ್ತದೆ. ಈ ಅಧ್ಯಯನಗಳು ಸಮಗ್ರ ನೆಲೆಯದ್ದಾದರೆ, ಇನ್ನೊಂದೆಡೆ ಒಂದೊಂದು ಕೃತಿಗಳ ಕುರಿತಂತೆ ಬಿಡಿಬಿಡಿಯಾದ ನೆಲೆಯಲ್ಲಿ ವಿಮರ್ಶೆಗಳು ಬಂದಿರುತ್ತದೆ. ಈ ವಿಮರ್ಶೆಗಳು ನಿರ್ದಿಷ್ಟವಾಗಿ ಆ ಕೃತಿಗಳ ವಿಶಿಷ್ಟತೆಯನ್ನು ಗುರುತಿಸುವ ನೆಲಯದ್ದೇ ಆಗಿರುತ್ತದೆ.

ಪ್ರಸ್ತುತ ಅಧ್ಯಯನದ ಉದ್ದೇಶ ವೈದೇಹಿಯವರ ಸಮಗ್ರ ಬರಹಗಳ ಕುರಿತಂತೆ ನಡೆಯುವ ವಿವರಣಾತ್ಮಕ ಉದ್ದೇಶವನ್ನು ಹೊಂದಿರದೆ, ನಿರ್ದಿಷ್ಟವಾಗಿ ಆಯ್ಕೆ ಮಾಡಿಕೊಂಡ ಕತೆಗಳ ಮೂಲಕ ವೈದೇಹಿ ಬರಹದ ಒಂದು ಮಗ್ಗುಲಾದ ಸ್ತ್ರೀ ಸಂವೇದನೆಯ ನೆಲೆಗಳನ್ನು ಗುರುತಿಸುವ ಮಾದರಿಯದ್ದು. ಈ ನೆಲೆಯ ಅಧ್ಯಯನದ ಉದ್ದೇಶವೆಂದರೆ, ಮುಖ್ಯವಾಗಿ ಹೆಣ್ಣಿನ ಬಹುಸ್ವರೂಪ, ಬಹುಮಗ್ಗುಲುಗಳು, ಸಾಮಾಜಿಕ, ಸಾಂಸ್ಕೃತಿಕ, ಆರ್ಥಿಕ ಹಿನ್ನೆಲೆಗಳು ವೈದೇಹಿ ಕತೆಗಳಲ್ಲಿ ಸತ್ವಪೂರ್ಣವಾಗಿ ನಿರೂಪಿಸಲ್ಪಟ್ಟಿದೆ. ಇಂತಹ ಬಹುರೂಪಿ ಹೆಣ್ಣಿನ ನೆಲೆಯನ್ನು ಹಿನ್ನೆಲೆಯಾಗಿಟ್ಟುಕೊಂಡು, ಅದನ್ನು ಆಯ್ದ ಕತೆಗಳ ಆಧಾರದಲ್ಲಿ ಶೋಧಿಸುವುದು ಈ ಅಧ್ಯಯನದ ಉದ್ದೇಶವಾಗಿದೆ. ·

ವೈದೇಹಿಯವರ ಬದುಕು-ಬರಹಗಳ ಅಧ್ಯಯನದ ಕುರಿತಂತೆ ಸಂಕ್ಷಿಪ್ತವಾದ ವಿವರಗಳನ್ನು ನೀಡುವುದರ ಮೂಲಕ ಅವರ ಬರಹಕ್ಕೆ ಹಿನ್ನೆಲೆಯಾದ ಸಾಮಾಜಿಕ ಸ್ವರೂಪವನ್ನು ಗಮನಿಸಬೇಕಾಗುತ್ತದೆ.

ಇದು ಕತೆಯ ಚೌಕಟ್ಟು ಮೀರಿದ ಸಂಗತಿಯಾದರೆ, ಕಥೆಗಳ ಶರೀರವೇ ಒಂದು ಬಂಧವಾಗಿ ಗೋಚರಿಸುವಾಗ, ಈ ಶರೀರವು ನೀಡುವ ಒಳ ವಿವರಗಳ ಆಧಾರದಲ್ಲಿ ಅಧ್ಯಯನ ಮುಂದುವರಿಯುತ್ತದೆ.

ಮುಖ್ಯವಾಗಿ ಈ ಅಧ್ಯಯನದ ಉದ್ದೇಶವೆಂದರೆ, ನಾನು ಆಯ್ಕೆ ಮಾಡಿಕೊಂಡಿರುವ ೧೭ ಕತೆಗಳ ಆಧಾರದಲ್ಲಿ ಕೌಟುಂಬಿಕ ಬದುಕು ಹೇಗೆ ನಿರೂಪಿತವಾಗಿದೆ ಎಂಬುದನ್ನು ಶೋಧಿಸುವ ಉದ್ದೇಶವನ್ನು ಹೊಂದಿದೆ. ಕೌಟುಂಬಿಕ ಬದುಕು ಹೆಣ್ಣಿನ ಪಾಲಿಗೆ ತನ್ನ ವ್ಯಕ್ತಿತ್ವದ ಸಮಗ್ರವನ್ನು ನಿರೂಪಿಸುವ ಏಕೈಕ ವೇದಿಕೆ ಆಗಿರುವಾಗ, ಈ ವೇದಿಕೆಯು ಹೆಣ್ಣಿಗೆ ನೀಡಿರುವ ಬದುಕಿನ ಮುಕ್ತತೆ ಮತ್ತು ನಿರ್ಬಂಧ ಮತ್ತು ಆ ಮೂಲಕ ಕೌಟುಂಬಿಕ ಬದುಕು ನಿರ್ವಹಿಸಲ್ಪಡುವ ರೀತಿಯನ್ನು ಗುರುತಿಸುತ್ತದೆ. ವಿಭಕ್ತ ಮಾದರಿಯ ಕುಟುಂಬದಲ್ಲಿ ಹೆಣ್ಣು ಹೇಗೆ 'ಕಾಣಿಸಿ'ಕೊಳ್ಳುತ್ತಾಳೆ? ಜೊತೆಗೆ, ಅವಿಭಕ್ತ ಕುಟುಂಬದಲ್ಲಿ ಹೇಗೆ ಕಾಣಿಸಿಕೊಳ್ಳುತ್ತಾಳೆ? ನಿರ್ವಹಿಸಲ್ಪಡುವ ಜವಾಬ್ದಾರಿಗಳೇನು? ಎಂಬುದನ್ನು ಈ ಅಧ್ಯಯನದಲ್ಲಿ ದಾಖಲಾಗುತ್ತದೆ. ಕುಟುಂಬದ ರೂಪವೇ ಆದ ಸ್ಥಾನಮಾನವನ್ನು ಕೂಡ ನಿರ್ಧರಿಸುತ್ತದೆ. ಈ ನೆಲೆಯಲ್ಲಿ ನೋಡಿದಾಗ, ಹೆಣ್ಣಿಗೆ ಕುಟುಂಬ ಜೀವನದಲ್ಲಿ ನಿರ್ವಹಿಸಬೇಕಾದ ವಿವಿಧ ಪಾತ್ರಗಳ ಬಗ್ಗೆ ಮನದಟ್ಟಾಗುತ್ತದೆ. ಅಲ್ಲಿ ವಿಧವೆಯಾಗಿ, ಗೃಹಿಣಿಯಾಗಿ, ಸಂಪ್ರದಾಯಸ್ಥೆಯಾಗಿ, ಯುವತಿಯಾಗಿ ಹೆಣ್ಣು ನಿರೂಪಣೆಗೊಳ್ಳುವ ಭಿನ್ನ ಬಗೆಗಳೇ ಇದಕ್ಕೆ ಸಾಕ್ಷಿಯಾಗಿ ನಿಲ್ಲುತ್ತದೆ.

ಸ್ತ್ರೀಯ ನಿರೂಪಣೆಯು ವಿವಿಧ ಆಕೃತಿಗಳಲ್ಲಿ ಕಾಣಿಸಿಕೊಳ್ಳುವುದರಿಂದ ಇಂತಹ ಆಕೃತಿಗಳು ಯಾವುವು ಎನ್ನುವುದನ್ನು ಆಯ್ದು ಕತೆಗಳ ಹಿನ್ನೆಲೆಯಲ್ಲಿ ವಿವರಿಸುವ ಉದ್ದೇಶವನ್ನು ಈ ಅಧ್ಯಯನ ಹೊಂದಿದೆ ಇಂತಹ ವಿವಿಧ ಆಕೃತಿಗಳಲ್ಲಿ ಕಾಣಿಸಿಕೊಳ್ಳುವ ಸ್ತ್ರೀಯ ವೈಶಿಷ್ಟ್ಯಗಳು, ಮಾದರಿಗಳನ್ನುವಿಶ್ಲೇಷಿಸಲಾಗಿದೆ. ಹೆಣ್ಣಿನ ಅಂತರಂಗದ ನಿರೂಪಣೆಗೆ ವೈದೇಹಿ ತೀವ್ರವಾಗಿ ಸ್ಪಂದಿಸುತ್ತಾರೆ. ಅದು ಅವರ ಕತೆಗಳಲ್ಲಿ ಕಾಣಿಸಿಕೊಳ್ಳುತ್ತದೆ. ಹೆಣ್ಣಿನ ಅಂತರಂಗದ ವಿವಿಧ ಮುಖಗಳನ್ನು ಯಾವುದೇ ಪೂರ್ವಾಗ್ರಹಿತವಾಗಿ, ಒಳ ತುಮುಲಗಳನ್ನುದಾಖಲಿಸುತ್ತಾ ಹೋಗುತ್ತಾರೆ. ಒಂದು ಪಾತ್ರಕ್ಕೆ ಸಹಜ ಸನ್ನಿವೇಶಗಳನ್ನು ಒದಗಿಸಿ ಅದರ ಒಳಮುಖ ಆಲೋಚನೆಗಳನ್ನು ಅಭಿವ್ಯಕ್ತ ಪಡಿಸಲು ಕತೆ ನಿರ್ದಿಷ್ಟ 'ಅವಕಾಶ'ಗಳನ್ನು ನಿರ್ಮಿಸಿಕೊಡುತ್ತದೆ. ಈ ಅಧ್ಯಯನದಲ್ಲಿ ಹೆಣ್ಣಿನ ಅಂತರಂಗದ ಚಿತ್ರಣ ಯಾವ ಬಗೆಯಲ್ಲಿ ಮೂಡಿಬಂದಿದೆ ಎಂಬುದನ್ನು ಗುರುತಿಸುವ ಉದ್ದೇಶವನ್ನು ಹೊಂದಿದೆ.

ವೈದೇಹಿ ಕತೆಗಳಲ್ಲಿ ಬರುವ ಸ್ತ್ರೀ ಪಾತ್ರಗಳು ಹಲವು ನೆಲೆಯದ್ದು. ಈ ನೆಲೆಗಟ್ಟಿನ ವೈವಿಧ್ಯವೇ ಕತೆಗಳ ಶಕ್ತಿ ಕೂಡ. ಒಂದು ಕಡೆ ತೀವ್ರವಾಗಿ ಸಂಪ್ರದಾಯಕ್ಕೆ ಶರಣಾಗಿ ಅದನ್ನು ಪಾಲಿಸುವುದರಲ್ಲೇ

ಬದುಕಿನ ಸಾರ್ಥಕತೆಯನ್ನು ಕಂಡುಕೊಳ್ಳುವ ಹೆಣ್ಣುಗಳಿದ್ದರೆ, ಇನ್ನೊಂದೆಡೆ ಇದ್ದ ಎಲ್ಲಾ ಸಂಪ್ರದಾಯಗಳನ್ನು ಮೀರಿ ಮುಕ್ತಳಾಗಬೇಕು ಎಂಬುದನ್ನು ತೀರಾ ಆಲೋಚನೆಯ ನೆಲೆಯಲ್ಲಿ ಹೊಂದಿಯೂ, ಅದನ್ನು ಕಾರ್ಯ ರೂಪಕ್ಕೆ ತರಲಾಗದೆ ಹಪಹಪಿಸುವ ಹೆಣ್ಣಿನ ಮಾದರಿಗಳಾಗಿವೆ. ಹಾಗಾಗಿ ವೈದೇಹಿಯ ಕತೆಗಳಲ್ಲಿ ಬರುವ ಪಾತ್ರಗಳು ತೋರುವ ಪ್ರತಿರೋಧ ಎಲ್ಲಾ ಕೃತಕ ಬಿಡುಗಡೆಯನ್ನು ಪಡೆಯುವುದರಲ್ಲಿ ಯಶ್ವಸಿಯಾಗಿದೆ, ಮತ್ತೆ ಅವೆಲ್ಲವನ್ನು ಸಹಿಸಿ, ಕುಟುಂಬ, ಸಮಾಜ ಎಂಬ ಚೌಕಟ್ಟಲ್ಲಿ ಕರಗಿ ಹೋಗುವ ನೆಲೆಯದ್ದೇ ಹೆಚ್ಚು. ಆದರೆ ಪ್ರತಿರೋಧವಿಲ್ಲದ ಒಪ್ಪಿತ ಮನಸ್ಥಿತಿ ಇಲ್ಲಿ ಇಲ್ಲ. ಈ ಅಧ್ಯಯನದಲ್ಲಿ ಪ್ರತಿರೋಧದ ನೆಲೆಗಳು ಯಾವುವು ಎಂಬುದನ್ನೂ, ಪ್ರತಿರೋಧಿಸುವ ಸಂಗತಿಗಳು ಯಾವುವು ಎಂಬುದನ್ನು ಗುರುತಿಸುತ್ತದೆ.

ಅಧ್ಯಯನದ ಸ್ವರೂಪ ಆಯ್ದ ಕತೆಗಳನ್ನು ವಿಮರ್ಶಾತ್ಮಕವಾಗಿ ನೋಡುತ್ತಲೇ, ಕತೆಯ ಅಂತರಂಗವೇ ಚಿತ್ರಿಸುವ ವಿವರಗಳ ಆಧಾರದಲ್ಲಿ ಗುರುತಿಸುವ ನೆಲೆಯದ್ದು. ಹಾಗಾಗಿ ಒಂದೊಂದು ಬಿಡಿ ಕತೆಯ ವಿವರವೂ ಮುಖ್ಯವಾಗುತ್ತದೆ. ಈಗಾಗಲೇ ನಡೆದಿರುವ ಅಧ್ಯಯನ ಹಾಗೂ ಬಂದಿರುವ ವಿಮರ್ಶೆಗಳ ಆಧಾರದಲ್ಲಿ ಈ ಅಧ್ಯಯನವನ್ನು ಮುಂದುವರಿಸಲಾಗಿದೆ.

ಅಧ್ಯಯನವು ಒಂದು ತಾತ್ವಿಕ ಚೌಕಟ್ಟನ್ನು ಮೊದಲೇ ರಚಿಸಿಕೊಂಡು ಅದರ ಆಧಾರದಲ್ಲಿ ವಿವರಗಳ ಆಧಾರದಲ್ಲೇ ಒಂದು ಮುಕ್ತ ಚೌಕಟ್ಟನ್ನು ರಚಿಸಿಕೊಂಡಿದೆ. ಹಾಗಾಗಿ ಯಾವುದೇ ಒಂದು ಸಿದ್ಧಾಂತ, ಚೌಕಟ್ಟಿಗೆ ಅಧ್ಯಯನ ಅಂಟಿಕೊಳ್ಳದೆ, ಅದು ಮುಕ್ತವಾಗಿರುವಂತೆ ಮಾಡಲಾಗಿದೆ. ಒಂದು ಸಿದ್ಧಾಂತವೇ ಚೌಕಟ್ಟಾದರೆ, ಅದು ಕತೆಗಳು ನೀಡುವ ಅನೇಕ ಒಳ ವಿವರಗಳನ್ನು ಬದಿಗೆ ಸರಿಸಿ ತನಗೆ ಬೇಕಾದವನ್ನು ಮಾತ್ರ ಆಯ್ದುಕೊಳ್ಳಬೇಕಾಗುತ್ತದೆ. ಆದರೆ ಈ ಅಧ್ಯಯನವು ಅಂತಹ ಯಾವುದೇ ಚೌಕಟ್ಟಿಗೆ ಕತೆಗಳನ್ನು ಒಳಪಡಿಸಲು ಗುರಿ ಹೊಂದಿಲ್ಲ. ಹಾಗಾಗಿ ಅಧ್ಯಯನವು ಮುಕ್ತ ಸ್ವರೂಪದ್ದು. ಈ ಮುಕ್ತತೆಯು ಕತೆಗಳ ಬಿಡಿ ಬಿಡಿ ವಿವರಗಳನ್ನು ದಾಖಲಿಸುವುದಕ್ಕೆ ಅನುಕೂಲಕರವಾಗಿ ಸಹಾಯಕವಾಗಿದೆ.

ಒಟ್ಟು ಅಧ್ಯಯನವು "ಸ್ತ್ರೀ" ಲೋಕವೊಂದು ವೈದೇಹಿ ಕತೆಗಳಲ್ಲಿ ಮೂಡಿ ಬಂದಿರುವ ಹಲವು ಮಾದರಿ ಬಗೆಗಳನ್ನು ಗುರುತಿಸಿ ಅದನ್ನು ದಾಖಲಿಸುವ ಮತ್ತು ಕತೆಗಳ ವಿವರಗಳ ಮೂಲಕ ಅದನ್ನು ವಿಮರ್ಶೆಗೆ ಒಳಪಡಿಸುವ ಸ್ವರೂಪದ್ದು.

## ೧.೩ ಅಧ್ಯಯನದ ವ್ಯಾಪ್ತಿ

'ವೈದೇಹಿಯವರ ಸಣ್ಣ ಕತೆಗಳಲ್ಲಿ ಸ್ತ್ರೀಲೋಕ' ಎಂಬ ಈ ಸಂಪ್ರಬಂಧ ಕಥೆಗಳ ವಿವರಗಳನ್ನು ಸೂಕ್ಷ್ಮಗ್ರಹಿಕೆಯಲ್ಲಿ ಹಿಡಿದಿಡುವ ಸಂದರ್ಭದಲ್ಲಿ ಅತಿವ್ಯಾಪ್ತಿಗೆ ಹಿಗ್ಗುವುದನ್ನು ತಪ್ಪಿಸಲು ಈ ಅಧ್ಯಯನದ ಸಂದರ್ಭದಲ್ಲಿ ಕೆಲವು ಮಿತಿಗಳನ್ನು ಹಾಕಿಕೊಳ್ಳಲಾಗಿದೆ. ಮುಖ್ಯವಾಗಿ ವೈದೇಹಿಯವರ 'ಅಲೆಗಳಲ್ಲಿ ಅಂತರಂಗ' ಕಥಾ ಸಂದರ್ಭದಲ್ಲಿ ಪ್ರಕಟವಾದ ೩೯ ಕಥೆಗಳಲ್ಲಿ ಕೇವಲ ೧೭ ಕಥೆಗಳನ್ನಷ್ಟೆ ಆಯ್ದುಕೊಂಡಿದ್ದೇನೆ. ಕಥೆಗಳ ಆಯ್ಕೆಯ ಸಂದರ್ಭದಲ್ಲಿ ಅವರ ಈವರೆಗಿನ ಪ್ರಕಟಿತ ಎಲ್ಲಾ ಕಥಾಸಂಕಲನಗಳಿಂದ ಪ್ರಾತಿನಿಧಿಕವಾಗಿ ಕೆಲವು ಕಥೆಗಳನ್ನು ಆಯ್ದುಕೊಳ್ಳಲಾಗಿದೆ. ಪ್ರತಿ ಸಂಕಲನದಿಂದಲೂ ನಿರ್ದಿಷ್ಟ ಸಂಖ್ಯೆಯ ಕಥೆಗಳನ್ನು ಆಯ್ದುಕೊಳ್ಳುವ ಬದಲು ಅಧ್ಯಯನದ ಸಂದರ್ಭದಲ್ಲಿ ಸಂಶೋಧಕರ ವಿವೇಚನೆಯಿಂದ ಆಯ್ಕೆಯನ್ನು ಮಾಡಲಾಗಿದೆ.

ಅಧ್ಯಯನದ ಪ್ರಧಾನ ವಿಷಯವಾಗಿ ಕೌಟುಂಬಿಕ ಬದುಕು, ಸ್ತ್ರೀ ಆಕೃತಿಗಳ ಚಿತ್ರಣ, ಸ್ತ್ರೀ ಅಂತರಂಗದ ಚಿತ್ರಣ, ಸ್ತ್ರೀ ಪರಿವರ್ತನೆಯ ಚಿತ್ರಣವನ್ನು ಗುರುತಿಸುವ ನೆಲೆಯಿಂದ ಕಥೆಗಳನ್ನು ವಿಂಗಡಿಸಿಕೊಳ್ಳಲಾಗಿದೆ. ವೈದೇಹಿಯವರ ಬಹುತೇಕ ಕಥೆಗಳ ಕೇಂದ್ರ ಹೆಣ್ಣೇ ಆಗಿರುವುದರಿಂದ ಒಂದಲ್ಲ ಒಂದು ಮಾದರಿಯ ಹೆಣ್ಣು ಕಥೆಯಲ್ಲಿ ಕಾಣಿಸಿಕೊಳ್ಳುತಾಳೆ. ಇಂತಹ ಸಂಕೀರ್ಣ ಸನ್ನಿವೇಶದಲ್ಲಿ ಕೆಲವು ನಿರ್ದಿಷ್ಟ ಮಾದರಿಯ ಹೆಣ್ಣಿನ ಚಿತ್ರಣವನ್ನು ಈ ಅಧ್ಯಯನ ಗುರುತಿಸುತ್ತದೆ.

ವೈದೇಹಿಯವರ ಕಥೆಗಳಲ್ಲಿ ಕಾಣಿಸಿಕೊಳ್ಳುವ ಸ್ತ್ರೀ ಮನಸ್ಸು ಬಹಳ ಸಂಕೀರ್ಣವಾದುದು. ಒಂದೇ ಪಾತ್ರ ಅಂತರಂಗದಲ್ಲಿ, ಒಳ ಮನಸ್ಸು ಸಂಪ್ರದಾಯವನ್ನು ಮೀರುವ, ರೂಢಿಯ ನಡೆಯನ್ನು ದಾಟುವ ತುಡಿತವನ್ನು ತೋರಿಸಿಯು, ಬಹಿರಂಗದಲ್ಲಿ ಸಂಪ್ರದಾಯಕ್ಕೆ ಅನಿವಾರ್ಯವಾಗಿ ಒಪ್ಪುವ ಮಾದರಿಗಳಿವೆ. ಆದರೆ ಇದು ಅಂತಿಮವಾಗಿ ಕಥೆಯ ಪಾತ್ರವೊಂದರಲ್ಲಿ ಸೃಷ್ಟಿಸಲಾಗಿದೆ. ವಾಸ್ತವತೆಯ ನೆಲೆಯಿಂದ ಸ್ಪಂದಿಸುವ ಉನ್ನತ ಗುಣವನ್ನು ಹೊಂದಿದೆ.

ಅಧ್ಯಯನಕ್ಕಾಗಿ ಆಯ್ಕೆಮಾಡಿಕೊಂಡಿರುವ ಕಥೆಗಳು ವೈದೇಹಿಯವರ ಸಮಗ್ರ ಕಥಾ ಸಾಹಿತ್ಯವನ್ನು ಮೌಲ್ಯಮಾಪನ ಮಾಡುವಷ್ಟು ಪ್ರಾತಿನಿಧಿಕವಲ್ಲವಾದರೂ ಈ ಕಥೆಗಳ ಮೂಲಕವೇ ವೈದೇಹಿ ಕಥೆಗಳು ಸ್ತ್ರೀಲೋಕದ ಸಂಕಥನವನ್ನು ಕಟ್ಟಿಕೊಡುವಲ್ಲಿ ಶಕ್ತವಾಗಿವೆ ಎನ್ನುವುದು ಅಧ್ಯಯನಕಾರರ ನಂಬುಗೆಯಾಗಿದೆ. ಆಳಿನಿಂದ ಯಜಮಾನಿಯವರೆಗೆ, ಬಾಲ್ಯದ ಬದುಕಿನಿಂದ ವೃದ್ಧಾಪ್ಯದ ಬದುಕಿನವರೆಗೆ, ತುಂಬು ಕುಟುಂಬದ

ನಡುವಿನ ಹೆಣ್ಣಿನಿಂದ, ಒಂಟಿ ಹೆಣ್ಣಿನ ತಲ್ಲಣ, ತಳಮಳದವರೆಗೆ ವ್ಯಾಪಿಸಿರುವ ಪಾತ್ರಗಳಲ್ಲಿ ಕಾಣಿಸಿಕೊಳ್ಳುವ 'ಸ್ತ್ರೀಲೋಕ' ಇಲ್ಲಿದೆ. ಹೆಣ್ಣು ಜಗತ್ತೊಂದು ಈ ಕಥೆಗಳಲ್ಲಿ ತೆರೆದುಕೊಳ್ಳುವ ಬಗೆಯಿಂದಲೇ ವಿಶಿಷ್ಟವಾಗಿರುವ ಪಾತ್ರಗಳನ್ನು ವಿವರವಾಗಿ ನೋಡುವ ಉದ್ದೇಶದಿಂದ ಕಥೆಗಳ ವ್ಯಾಪ್ತಿಯನ್ನು ಕಿರಿದುಗೊಳಿಸಿಕೊಳ್ಳಲಾಗಿದೆ.

ಮುಖ್ಯವಾಗಿ ಸಮಗ್ರ ಕಥೆಗಳಿಂದ ತಾತ್ವಿಕವಾಗಿ ಈ ಅಧ್ಯಯಾನದ ಉದ್ದೇಶಕ್ಕೆ ಮುಖ್ಯವಾಗಿರುವ ಕತೆಗಳಾದ 'ಚಿಪ್ಪು' , 'ಬೀಳುಬೇರು' , 'ಮರಗಿಡಬಳ್ಳಿ' , 'ಅಕ್ಕು' , 'ಗೂಡಿನೊಳಗೆ ಒಂದುಹಕ್ಕಿ' , 'ಚಂದಲೆ', 'ಒಂದು ಬಾಗಿಲಸದ್ದು' , 'ಅವಲಂಬಿತರು' , 'ಆತ' , 'ಒಂದು ಕಳ್ಳ ವೃತ್ತಾಂತ', 'ಗುಲಾಬಿ ಟಾಕೀಸು ಮತ್ತು ಸಣ್ಣ ಅಲೆಗಳು' , 'ಸೌಗಂಧಿಯಸ್ವಗತಗಳು', 'ಪುಟ್ಟಮ್ಮತ್ತೆ ಮತ್ತು ಮೊಮ್ಮಗಳು' , 'ಅಂತರಂಗದ ಪುಟಗಳು', 'ಅಮ್ಮಚ್ಚಿಯೆಂಬ ನೆನಪು', 'ಕಾಣೆಯಾದವರು', 'ಪ್ರಶ್ನೆ' ಈ ಕತೆಗಳನ್ನಿಲ್ಲಿ ಆಯ್ದುಕೊಳ್ಳಲಾಗಿದೆ. ಈ ಕಥೆಗಳಿಗೆ ಸೀಮಿತವಾಗಿ ಮುಂದಿನ ಅಧ್ಯಯನವನ್ನು ಕೈಗೊಳ್ಳಲಾಗಿದೆ.

## ೧.೪ ಹಿಂದಣ ಅಧ್ಯಯನದ ಹೆಜ್ಜೆಗಳು

ವೈದೇಹಿಯವರ ಕಥೆಗಳು ಬಹಳ ವಿಸ್ತಾರವಾದ ವ್ಯಾಪ್ತಿಯನ್ನು ಹೊಂದಿರುವಂತಹುದು. ಹಲವು ಸಂಕೀರ್ಣ ಆಯಾಮಗಳನ್ನು ಹೊಂದಿರುವ ಇವರ ಕಥೆಗಳನ್ನು ಅಧ್ಯಯನಕ್ಕೆ ಆಯ್ಕೆ ಮಾಡಿರುತ್ತೇನೆ. ಅವರ ಕಥಾ ಜಗತ್ತು ವ್ಯಾಪಕವಾಗಿದ್ದು ಅವರ ಕಥೆಗಳ ಅಧ್ಯಯನ ಈವರೆಗೆ ನಡೆದಿಲ್ಲ. ಕೆಲವು ಪತ್ರಿಕೆಗಳಲ್ಲಿ, ವಿಮರ್ಶಾ ಸಂಕಲನಗಳಲ್ಲಿ ಪ್ರಾತಿನಿಧಿಕವಾದ ಕೆಲವು ಕಥಾ ವಿಮರ್ಶೆಗಳು ಪ್ರಕಟಗೊಂಡಿವೆಯಾದರೂ, ವ್ಯಾಪಕವಾಗಿ ಮತ್ತು ಸಮಗ್ರವಾಗಿ ನಿರ್ದಿಷ್ಟವಾಗಿ "ವೈದೇಹಿಯವರ ಸಣ್ಣ ಕಥೆಗಳಲ್ಲಿ ಸ್ತ್ರೀ ಲೋಕ" ಎಂಬ ಪರಿಕಲ್ಪನೆಯನ್ನು ಇಟ್ಟುಕೊಂಡು ಈ ವರೆಗೆ ಅಧ್ಯಯನಗಳು ನಡೆದಿಲ್ಲ. ಈ ಹಿನ್ನೆಲೆಯಲ್ಲಿ ಈ ಸಂಶೋಧನಾ ಪ್ರಬಂಧವು ಒಂದು ನಿರ್ದಿಷ್ಟ ಪರಿಕಲ್ಪನೆಯನ್ನು ಇಟ್ಟುಕೊಂಡು ಅಧ್ಯಯನವನ್ನು ಮಾಡಲಾಗಿದೆ.

ಈವರೆಗೆ ನಡೆದ ಕೆಲವೊಂದು ಬಿಡಿಬಿಡಿಯಾದ ಅಧ್ಯಯನಗಳನ್ನು ಈ ಅಧ್ಯಯನಕ್ಕೆ ಪೂರಕವಾಗಿ ಬಳಸಿಕೊಳ್ಳಲಾಗಿದೆ. ಬಹಳ ಕಡಿಮೆ ಸಂಖ್ಯೆಯಲ್ಲಿ ಈ ಬಗೆಯ ಒಂದಷ್ಟು ಚರ್ಚೆ, ವಿಮರ್ಶೆಗಳು ನಡೆದಿವೆ. ವೈದೇಹಿಯವರ ಸಾಹಿತ್ಯದ ಬಗ್ಗೆ ಡಾ: ಸುರೇಖಾ ಕೆ. ರವರ 'ವೈದೇಹಿಯವರ ಸಾಹಿತ್ಯ ಒಂದು ಅಧ್ಯಯನ' ಎಂಬ ಪ್ರಬಂಧ, ಟಿ.ಪಿ. ಅಶೋಕರವರ 'ವೈದೇಹಿಯವರ ಕಥೆಗಳು' ಎಂಬ ವಿಮರ್ಶೆ, ಬಿ. ಜನಾರ್ಧನ ಭಟ್ ಸಂಪಾದನೆ ಮಾಡಿರುವ 'ಬದುಕು ಭಾವದ ಕಥೆಗಳು' ಎಂಬ ಕೃತಿ, ಡಾ: ಕೆ. ಎನ್.

ದೊಡ್ಡಮನಿಯವರು ಮಾಡಿರುವ ವೈದೇಹಿಯವರ ಕ್ರೌಂಚ ಪಕ್ಷಿ ಕಥೆ ವಿಮರ್ಶೆ, ಶ್ರೀಮತಿ ಸುಲತಾ ವಿದ್ಯಾಧರ್‌ರವರ 'ವೈದೇಹಿ ಕಥೆಗಳಲ್ಲಿ ಸ್ತ್ರೀ ಸಂಸ್ಕೃತಿ' ಎಂಬ ಲೇಖನ.

ಈ ಎಲ್ಲಾ ಅಧ್ಯಯನಗಳನ್ನು ಬಳಸಿಕೊಳ್ಳುತ್ತಾ ಈ ಲೇಖನಗಳು ವ್ಯಕ್ತ ಪಡಿಸುವ ಮನೋಧರ್ಮಗಳನ್ನು ಜೊತೆಗಿಟ್ಟುಕೊಂಡು ಒಟ್ಟಿನಲ್ಲಿ "ವೈದೇಹಿಯವರ ಸಣ್ಣ ಕಥೆಗಳಲ್ಲಿ ಸ್ತ್ರೀಲೋಕ" ಎಂಬ ವಿಷಯದ ಅಧ್ಯಯನ ನಡೆಯುತ್ತದೆ.

# ೨. ವೈದೇಹಿ ಬದುಕು ಬರಹ

ವೈದೇಹಿ ಎಂಬ ಕಾವ್ಯನಾಮದಿಂದ ಪ್ರಸಿದ್ಧರಾದ ಇವರು ಕನ್ನಡದ ವಿಶಿಷ್ಟ ಬರಹಗಾರ್ತಿಯರಲ್ಲಿ ಒಬ್ಬರು. ಉಡುಪಿ ಜಿಲ್ಲೆಯ ಕುಂದಾಪುರದಲ್ಲಿ ಫೆಬ್ರವರಿ ೧೨, ೧೯೪೫ ರಂದು ಜನಿಸಿದ ಇವರ ನಿಜವಾದ ಹೆಸರು ಜಾನಕಿ. ತಂದೆ ಎ.ವಿ.ಎನ್.ಹೆಬ್ಬಾರ್, ವೃತ್ತಿಯಲ್ಲಿ ವಕೀಲರು. ತಾಯಿ ಮಹಾಲಕ್ಷ್ಮಮ್ಮ ಗೃಹಿಣಿ. ವೈದೇಹಿಯವರು ತಮ್ಮ ಪ್ರಾಥಮಿಕ ಹಾಗೂ ಪ್ರೌಢಶಾಲೆಯ ವಿದ್ಯಾಭ್ಯಾಸವನ್ನು ಕುಂದಾಪುರದಲ್ಲಿ ಮುಗಿಸಿದರು. ಮುಂದಿನ ವಿದ್ಯಾಭ್ಯಾಸಕ್ಕೆ ಅಲ್ಲಿ ಕಾಲೇಜು ಇಲ್ಲದಿದ್ದರಿಂದ ಒಂದು ವರ್ಷ ಮನೆಯಲ್ಲೇ ಉಳಿದರು. ಮುಂದಿನ ವರ್ಷ ಕುಂದಾಪುರದ ಭಂಡಾರ್ ಕಾರ್ಸ್ ಕಾಲೇಜಿನಲ್ಲಿ ಮುಂದುವರಿಸಿ ಬಿ.ಕಾಂ. ಪದವಿಯನ್ನು ಪಡೆದುಕೊಂಡರು. ವೈದೇಹಿ ಎಂಬ ಕಾವ್ಯನಾಮದಿಂದ 'ನೀರೆಯರ ಮನ' ಎಂಬ ಲೇಖನವನ್ನ ಮೊದಲು ಪ್ರಕಟಪಡಿಸಿದರು.

ವೈದೇಹಿಯವರು ಹುಟ್ಟುವಾಗಲೇ ತಂದೆಯವರಾದ ಎ.ವಿ.ಎನ್.ಹೆಬ್ಬಾರ್‌ರಿಗೆ ಐವತ್ತು ವರುಷ ದಾಟಿತ್ತು. ವೃತ್ತಿಯಲ್ಲಿ ವಕೀಲರಾದ ಇವರು ತುಂಬಾ ಶಿಸ್ತು ಹಾಗೂ ಕಟ್ಟುನಿಟ್ಟಿನ ವ್ಯಕ್ತಿ. ಸಂಪ್ರದಾಯ ನಿಷ್ಠರಾಗಿದ್ದರೂ ಕೂಡ ಹೆಚ್ಚು ಮಾನವೀಯ ಕಳಕಳಿಯನ್ನು ಹೊಂದಿದ್ದರು. ಸಾಹಿತ್ಯ, ಸಂಗೀತವೆಂದರೆ ಅಚ್ಚುಮೆಚ್ಚು. ಹೆಚ್ಚು ಪುಸ್ತಕಗಳನ್ನು ಓದುವ ಅಭ್ಯಾಸವಿದ್ದುದರಿಂದ ವಿವಿಧ ಭಾಷೆಯ ಪುಸ್ತಕಗಳ ಸಂಗ್ರಹವೇ ಮನೆಯಲ್ಲಿ ತುಂಬಿತ್ತು. ಕಕ್ಷಿಗಾರರೆಲ್ಲ ಯಾವ ಸಮಯದಲ್ಲಿ ಬಂದರೂ ಕೂಡ ಸಮಾಧಾನವಾಗಿ ಮಾತನಾಡಿಸುತ್ತಿದ್ದರು. ಅವರು ಬಂದ ಕಾರಣಗಳನ್ನು ವಿಚಾರಿಸುತ್ತಿದ್ದರು. ಏನಾದರೂ ತೊಂದರೆಗೊಳಗಾದವರೂ, ಸಂಬಂಧಿಗಳು, ಗಂಡನನ್ನು ಕಳಕೊಂಡವರು, ಯಾರೇ ಕಷ್ಟ ಅಂತ ಬಂದವರನ್ನು ಮನೆಯಲ್ಲೇ ಇಟ್ಟುಕೊಂಡು ಪೋಷಿಸುತ್ತಿದ್ದರು. ಇಷ್ಟೆಲ್ಲಾ ಸಹಾಯ ಮಾಡುತ್ತಿದ್ದ ಹೆಬ್ಬಾರರು ಮಹಿಳೆಯರ ವಿಚಾರದಲ್ಲಿ ಮಾತ್ರ ಬಹಳ ಹಳೆಯ ಕಾಲದವರಂತೆ ವರ್ತಿಸುತ್ತಿದ್ದರು. ಹೆಬ್ಬಾರರು ಎಷ್ಟೇ ತಡವಾಗಿ ಊಟಕ್ಕೆ ಬಂದರೂ ಅಲ್ಲಿಯವರೆಗೆ ಊಟ ಮಾಡದೇ ನಿದ್ದೆ ತೂಕಡಿಸುತ್ತಾ ಕಾಯುತ್ತಿದ್ದ ವೈದೇಹಿಯವರ ತಾಯಿ. ತಂದೆಯವರ ಬಗ್ಗೆ ಅವರೇ ಹೇಳುವ ಮಾತು "ತಂದೆಯ ನೆನಪೆಂದರೆ ನನಗೆ ಥಟ್ಟನೆ ಬರುವುದು, ಊಟದ ಕೋಣೆಯ ಕಂಬಕ್ಕೆ ಒರಗಿ ನಿದ್ದೆ ಕೂರುತ್ತ ಅವರಿಗಾಗಿ ಕಾಯುತ್ತ ಕುಳಿತಿರುತ್ತಿದ್ದ ನನ್ನ ಅಮ್ಮನ ಚಿತ್ರವೇ. ಈಗ ಯೋಚಿಸಿದರೆ ನನ್ನ ತಂದೆ ಮಹಿಳೆಯರ ವಿಚಾರದಲ್ಲಿ ಮಾತ್ರ ಬಹಳ ಹಳೆಯ ರೀತಿಯಲ್ಲಿ ಚಿಂತಿಸುತ್ತಿದ್ದರು ಅಂತ ಅನ್ನಿಸುತ್ತದೆ. ಇಷ್ಟೆ ಅಲ್ಲ ಈಗ ಅವರಿದ್ದಿದ್ದರೆ ಅವರೊಡನೆ ಕೇಳಲೇ ಬೇಕಾದ ಮುಖ್ಯ ಪ್ರಶ್ನೆಗಳಿದ್ದವು"[೧] ಎಂಬ ಮಾತು.

ವೈದೇಹಿಯ ತಾಯಿಯಾದ ಮಹಾಲಕ್ಷ್ಮಮ್ಮ, ಹೆಬ್ಬಾರರ ಎರಡನೆಯ ಹೆಂಡತಿ. ತಮ್ಮ ಹದಿನೇಳನೇ ವಯಸ್ಸಿನಲ್ಲಿ ಮದುವೆಯಾದರು. ಮಂಗಳೂರಿನ ಮಧ್ಯಮ ವರ್ಗದ ರೈತ ಕುಟುಂಬದಿಂದ ಬಂದವರಾಗಿದ್ದರು. ಅವರು ಮನೆಗೆ ಕಾಲಿಡುವಾಗಲೇ ತುಂಬಾ ಜನರಿಂದ ತುಂಬಿತ್ತು. ಹೆಬ್ಬಾರರ ಮೊದಲ ಹೆಂಡತಿಗೆ ಐದು ಜನ ಮಕ್ಕಳಿದ್ದರು. ಅವರನ್ನು ಪ್ರೀತಿಯಿಂದ ನೋಡಿಕೊಂಡವರು. ವಿಶೇಷ ವ್ಯಕ್ತಿತ್ವವನ್ನು ಹೊಂದಿದ್ದರು. ಎಲ್ಲರನ್ನೂ ಒಂದೇ ರೀತಿಯಿಂದ ಕಾಣುತ್ತಿದ್ದರು.

ವೈದೇಹಿಯವರದ್ದು ತುಂಬು ಕುಟುಂಬ ಒಟ್ಟು ಹತ್ತು ಅಕ್ಕಂದಿರು ಹಾಗೂ ನಾಲ್ಕು ಅಣ್ಣಂದಿರನ್ನು ಹೊಂದಿದ್ದರು. ಎಲ್ಲರೂ ವಿದ್ಯಾವಂತರು. ಹಾಗೂ ಸಾಹಿತ್ಯದಲ್ಲಿ ಆಸಕ್ತಿ ಉಳ್ಳವರಾಗಿದ್ದರು. ಅಕ್ಕಂದಿರಿಗೆ ಅನೇಕ ಲೇಖಕಿಯರ ಪರಿಚಯವಿತ್ತು. ಅದರಲ್ಲಿ ಎಂ.ಕೆ.ಇಂದಿರಾ ಒಬ್ಬರು, ಆಗಾಗ ಮನೆಗೆ ಬಂದು ಹೋಗುತ್ತಿದ್ದರು. ಹಾಗಾಗಿ ಅನೇಕ ಪುಸ್ತಕಗಳು ವೈದೇಹಿಯವರಿಗೆ ಓದಲು ಸಿಗುತ್ತಿತ್ತು. ಇಂದಿರಾರವರ ಎಲ್ಲಾ ಪುಸ್ತಕಗಳನ್ನು ಓದಿ ಮುಗಿಸುತ್ತಿದ್ದರು. ಚಿಕ್ಕಂದಿನಿಂದಲೇ ಅನೇಕ ಲೇಖಕರ ಕೃತಿಗಳನ್ನು ಅಕ್ಕಂದಿರೊಂದಿಗೆ ಸೇರಿಕೊಂಡು ಓದುತ್ತಿದ್ದರು. ಇಂತಹ ಸಾಹಿತ್ಯಾಸಕ್ತ ವೈದೇಹಿಯವರನ್ನು ಬರವಣಿಗೆಯಲ್ಲಿ ತೊಡಗುವಂತೆ ಮಾಡಿತು.

ವೈದೇಹಿಯವರ ಅಣ್ಣಂದಿರು ಕೂಡ ಸಾಹಿತ್ಯ ಪ್ರಿಯರಾಗಿದ್ದರು. ಒಬ್ಬ ಅಣ್ಣ ಇಂಗ್ಲಿಷ್ ಎಂ.ಎ.ಮಾಡಿದ್ದು, ಮತ್ತೊಬ್ಬ ಅಣ್ಣ ಕೂಡ ಬರಹಗಾರರಾಗಿದ್ದರು. ಹೀಗೆ ಇಡೀ ಕುಟುಂಬವೇ ಸಾಹಿತ್ಯಭಿರುಚಿಯ ಕುಟುಂಬವಾಗಿತ್ತು. ಇದುವೇ ವೈದೇಹಿಯವರಿಗೆ ಸಾಹಿತ್ಯದಲ್ಲಿ ಆಸಕ್ತಿ ಹುಟ್ಟಲು ಕಾರಣವಾಯಿತು.

ವೈದೇಹಿಯವರು ಕೋಟ ಬ್ರಾಹ್ಮಣ ಕುಟುಂಬಕ್ಕೆ ಸೇರಿದವರಾಗಿದ್ದರು. ಅವರದ್ದು ಸಂಪ್ರದಾಯ ಬದ್ಧ ಕುಟುಂಬವಾಗಿತ್ತು. ಪ್ರತಿದಿನ ಒಂದು ಗಂಟೆ ಭಜನೆ ಮಾಡುತ್ತಿದ್ದರು. ಹೆಣ್ಣು ಮಕ್ಕಳು ಮನೆಯ ಚಾವಡಿ ಪಡಸಾಲೆಗೆ ಬರುವಂತಿರಲಿಲ್ಲ. ಬರಬೇಕೆಂದರೆ ಗಂಡಸರು ಯಾರೂ ಇಲ್ಲದಿರುವಾಗ ಬರಬೇಕಾಗಿತ್ತು. ಹೆಣ್ಣು ಮಕ್ಕಳು ಕುರ್ಚಿಯಲ್ಲಿ ಕೂರುವಂತಿರಲಿಲ್ಲ. ಹಾಗೂ ಧೈರ್ಯದಿಂದ ಮಾತನಾಡುವಂತಿರಲಿಲ್ಲ. ಎಲ್ಲಿಗಾದರೂ ಹೊರಗಡೆ ಹೋಗಬೇಕಾದರೂ ಕೂಡ ಮನೆಯ ಗಂಡಸರು ಅಥವಾ ಕೆಲಸದವರ ಜೊತೆ ಹೋಗಬೇಕಾಗಿತ್ತು.

ಹೀಗೆ ತುಂಬು ಸಂಸಾರದಲ್ಲಿ ಬೆಳೆದ ವೈದೇಹಿಯವರು ತಮ್ಮ ಇಪ್ಪತ್ತಮೂರನೆಯ ವಯಸ್ಸಿನಲ್ಲಿ ಶಿವಮೊಗ್ಗದ ಕೃಷ್ಣಮೂರ್ತಿಯವರೊಡನೆ ಮದುವೆಯಾದರು. ಇವರ ಪತಿ ಬಹಳ ಒಳ್ಳೆಯ ವ್ಯಕ್ತಿಯಾಗಿದ್ದರು. ಸಾಹಿತ್ಯ, ಸಂಗೀತ, ನಾಟಕಗಳಲ್ಲಿ ಆಸಕ್ತಿ ಇದ್ದವರು. ಹಾಗಾಗಿ ಇಂತಹ ಸಮಾರಂಭಗಳಿಗೆ ಪತ್ನಿಯನ್ನು ಜೊತೆಗೆ ಕರೆದುಕೊಂಡು ಹೋಗುತ್ತಿದ್ದರು. ವೈದೇಹಿಯವರ ಎಲ್ಲಾ ಬರವಣಿಗೆಯನ್ನು ಪತಿ ಕೃಷ್ಣಮೂರ್ತಿ ಓದಿ, ವಿಮರ್ಶಿಸುತ್ತಿದ್ದರು. ಹಾಗೂ ಬರೆಯಲು ಪ್ರೋತ್ಸಾಹಿಸುತ್ತಿದ್ದರು. ಹಾಗಾಗಿ ವೈದೇಹಿಯವರಿಗೆ ಬರೆಯಲು ಆಸಕ್ತಿ ಹೆಚ್ಚಿತ್ತು. ಪತಿಯ ಊರಾದ ಶಿವಮೊಗ್ಗದಲ್ಲಿ ಇವರು ಅನೇಕ ಕನ್ನಡದ ಮುಖ್ಯ ಲೇಖಕರಾದ ಅನಂತಮೂರ್ತಿ, ಲಂಕೇಶ್ ಮೊದಲಾದವರ ಕೃತಿಗಳನ್ನು ಓದುತ್ತಿದ್ದರು. ಲಂಕೇಶ್‌ರ 'ನಿವೃತ್ತರು' ಕಥೆಯನ್ನು ಓದಿದ ಮೇಲೆ ವೈದೇಹಿಯವರಿಗೆ ಕಥೆಯ ಮೇಲೆ ಇದ್ದ ದೃಷ್ಟಿಕೋನವೇ ಬದಲಾಯಿತು. ಶ್ರೀಮತಿ ಅನುಪಮ ನಿರಂಜನರವರು ವೈದೇಹಿಯವರ ಬರವಣಿಗೆಯನ್ನು ಮೆಚ್ಚುತ್ತಾ ಪತ್ರ ಬರೆಯುತ್ತಿದ್ದರು. ಇದರಿಂದ ಸ್ಫೂರ್ತಿ ಹೆಚ್ಚಿತ್ತು. ಮುಖ್ಯವಾಗಿ ಇವರ ಮೇಲೆ ಪ್ರಭಾವ ಬೀರಿದ ಸಂಸ್ಥೆ ಹೆಗ್ಗೋಡಿನ 'ನೀನಾಸಂ' ಸಂಸ್ಥೆಯಾಗಿತ್ತು. ಹಾಗೇ ಅಕ್ಷರ ಪ್ರಕಾಶನ ಅವರ ಪುಸ್ತಕಗಳನ್ನು ಪ್ರಕಟಿಸಿತ್ತು.

ಹೀಗೆ ವೈದೇಹಿಯವರು ತಮ್ಮ ಚಿಕ್ಕ ವಯಸ್ಸಿನಲ್ಲೇ ಬರವಣಿಗೆಯನ್ನು ಆರಂಭಿಸಿದ್ದರು. ಅವರ ಅಕ್ಕಂದಿರು, ಅಣ್ಣಂದಿರೆಲ್ಲರ, ಸಾಹಿತ್ಯಾಭಿರುಚಿಯಿಂದಲೇ ಮನೆಯವರೆಲ್ಲರೂ ಸೇರಿ ಒಂದು ಸಾಹಿತ್ಯ ಪತ್ರಿಕೆ ಎಂಬ ಹೆಸರಲ್ಲಿ ಸಣ್ಣ ಪುಸ್ತಕ ಹೊರಡಿಸಿದ್ದರು. ಆ ಪುಸ್ತಕದಲ್ಲಿ ವೈದೇಹಿಯವರು 'ರೂಪಾಳ ಮದುವೆ' ಎಂಬ ಕಥೆಯನ್ನು ಬರೆದಿದ್ದರು. ಆ ಕಥೆ ಅವರ ಸ್ವಂತ ಅನುಭವದಂತಿರಲಿಲ್ಲ. ಆದರೆ ನಂತರ ಕಾಲೇಜಿಗೆ ಸೇರಿಕೊಂಡ ಮೇಲೆ ಬೇರೆ ಬೇರೆ ಕಥೆಗಳನ್ನ ಬರೆಯತೊಡಗಿದ್ದರು. ಕಥಾ ಸ್ಪರ್ಧೆಗೆ ಸೇರಿ ಅದರಲ್ಲಿ ಬಹುಮಾನವನ್ನು ಪಡಕೊಂಡರು. ಆಗೆಲ್ಲಾ ಅವರು ಅಷ್ಟು ಗಂಭೀರವಾಗಿ ತೆಗೆದುಕೊಂಡಿರಲಿಲ್ಲ. ಆದರೆ ಮದುವೆಯಾದ ನಂತರ ಬರವಣಿಗೆಯನ್ನು ಗಂಭೀರವಾಗಿ ತೆಗೆದುಕೊಂಡರು. ಅವರ ಮೊದಲ ಕಥೆಗಳ ಭಾಷೆ ಕೂಡ ಹಳೆ ಮೈಸೂರು ಕನ್ನಡ ಭಾಷೆಯಾಗಿತ್ತು. ಆಮೇಲೆ ಕುಂದಾಪುರದ ಕೋಟ ಕನ್ನಡದಲ್ಲಿ ಬರೆಯ ತೊಡಗಿದರು.

ಮೊದಲು ಬಿಡಿಕತೆಗಳನ್ನು ಬರೆದು ಕಸ್ತೂರಿ, ಕರ್ಮವೀರ, ಸುಧಾ ಪತ್ರಿಕೆಗಳಲ್ಲಿ ಪ್ರಕಟಿಸುತ್ತಿದ್ದರು. ನಂತರ ಮೊಟ್ಟ ಮೊದಲಿಗೆ ೧೯೭೯ರಲ್ಲಿ 'ಮರಗಿಡ ಬಳ್ಳಿ' ಕಥಾ ಸಂಕಲನವನ್ನು ಹೊರತಂದರು. ನಂತರ ೧೯೮೪ರಲ್ಲಿ 'ಅಂತರಂಗದ ಪುಟಗಳು' ಕಥಾಸಂಕಲನವನ್ನು ಹೊರತಂದರು. ಇದಕ್ಕೆ ಗೀತಾದೇಸಾಯಿ

ದತ್ತಿನಿಧಿ ಪ್ರಶಸ್ತಿ ಸಿಕ್ಕಿತು. ೧೯೮೯ರಲ್ಲಿ 'ಗೋಲ' ಕಥಾ ಸಂಕಲನಕ್ಕೆ ವರ್ಧಮಾನ ಉದಯೋನ್ಮುಖ ಪ್ರಶಸ್ತಿ, ೧೯೯೧ರಲ್ಲಿ 'ಸಮಾಜಶಾಸ್ತ್ರಜ್ಞೆಯ ಟಿಪ್ಪಣಿಗೆ' ಕಥಾ ಸಂಕಲನಕ್ಕೆ ಅನುಪಮಾ ಪ್ರಶಸ್ತಿ ದೊರೆಯಿತು. ೧೯೯೦ರಲ್ಲಿ ಪ್ರಕಟವಾದ ಪ್ರಪ್ರಥಮ 'ಬಿಂದು ಬಿಂದಿಗೆ' ಕಾವ್ಯ ಸಂಕಲನವು ಗೀತಾದೇಸಾಯಿ ದತ್ತಿನಿಧಿ ಪ್ರಶಸ್ತಿಯನ್ನು ಪಡೆಯಿತು. ೧೯೯೧ರಲ್ಲಿ ಬಂದ 'ಧಾಂಧೂಂ ಸುಂಟರಗಾಳಿ', ಮೂಕನ ಮಕ್ಕಳು', 'ಗೊಂಬೆ ಮ್ಯಾಕ್ ಬೇತ್', 'ಢಾಣ ಡಂಗೂರ', ' ನಾಯಿಮರಿ', ಮಕ್ಕಳ ನಾಟಕಗಳಿಗೆ ರಾಜ್ಯ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ದೊರೆಯಿತು. 'ಅಸ್ಪೃಶ್ಯರು' ಕಾದಂಬರಿಗೆ ಎಂ.ಕೆ.ಇಂದಿರಾ ಪ್ರಶಸ್ತಿ, 'ಹಗಲು ಗೀಚಿದ ನೆಂಟ' ಕೃತಿಗೆ 'ಕಥಾ' ಪ್ರಶಸ್ತಿ, 'ಅಮ್ಮಚ್ಚಿಯೆಂಬ ನೆನಪು' ಕಥಾಸಂಕಲನಕ್ಕೆ ಕಥಾ ಪ್ರಶಸ್ತಿ, 'ಮಲ್ಲಿನಾಥನಧ್ಯಾನ' ಪ್ರಬಂಧ ಸಂಕಲನಕ್ಕೆ ರಾಜ್ಯ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಹಾಗೇ ಅತ್ತಿಮಬ್ಬೆ ಪ್ರಶಸ್ತಿ, ಕರ್ನಾಟಕ ರಾಜ್ಯದ ದಾನ ಚಿಂತಾಮಣಿ ಅತ್ತಿಮಬ್ಬೆ ಪ್ರಶಸ್ತಿ ಹಾಗೂ ೨೦೦೯ ರಲ್ಲಿ 'ಕ್ರೌಂಚಪಕ್ಷಿಗಳು' ಕಥಾಸಂಕಲನಕ್ಕೆ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಬಂದಿರುತ್ತದೆ.

# ೩. ವೈದೇಹಿಯವರ ಕತೆಗಳಲ್ಲಿ ಚಿತ್ರಣಗೊಂಡ ಕೌಟುಂಬಿಕ ಬದುಕು.

೩.೧ : ಪ್ರಸ್ತಾವನೆ

೩.೨ : ವಿಭಕ್ತ ಕುಟುಂಬ

೩.೩. :ಅವಿಭಕ್ತ ಕುಟುಂಬ

# ೩: ವೈದೇಹಿಯವರ ಕತೆಗಳಲ್ಲಿ ಚಿತ್ರಣಗೊಂಡ ಕೌಟುಂಬಿಕ ಬದುಕು

## ೩.೧ ಪ್ರಸ್ತಾವನೆ

ಕೂಡಿ ಉಂಬ ವ್ಯವಸ್ಥೆಯೇ ಕುಟುಂಬ. ಇಂತಹ ಕೂಡಿ ಉಂಬ ವ್ಯವಸ್ಥೆಯಲ್ಲಿ ಸಾಮಾಜಿಕ ವಿಚಾರಗಳು, ಮತ್ತು ವೈಯಕ್ತಿಕ ವಿಚಾರಗಳು ಬಂದು ಹೋಗುತ್ತವೆ. ಕುಟುಂಬಕ್ಕೆ ಒಬ್ಬ ಯಜಮಾನನಿರುತ್ತಾನೆ. ಆತ ಮನೆಯ ಎಲ್ಲ ಜವಾಬ್ದಾರಿಗಳನ್ನು ನಿಭಾಯಿಸುವ ಸಾಮರ್ಥ್ಯವನ್ನು ಹೊಂದಿರುತ್ತಾನೆ. ಕುಟುಂಬದಲ್ಲಿ ವಿಭಕ್ತ ಮತ್ತು ಅವಿಭಕ್ತ ಕುಟುಂಬ ಎಂಬ ಎರಡು ವಿಭಾಗಗಳನ್ನು ಕಾಣಬಹುದು. ವಿಭಕ್ತ ಕುಟುಂಬವೆಂದರೆ ಪುಟ್ಟ ಸಂಸಾರವಾಗಿರುತ್ತದೆ. ಅವಿಭಕ್ತ ಕುಟುಂಬದಲ್ಲಿ ಅನೇಕ ಸಂಸಾರಗಳು ಒಂದೇ ಮನೆಯಲ್ಲಿ ವಾಸಮಾಡುತ್ತಿರುವಂತದ್ದು. ಇಲ್ಲಿ ಹಿರಿಯ ವ್ಯಕ್ತಿ ಮನೆಯ ಯಜಮಾನನಾಗಿರುತ್ತಾನೆ. ಆತನ ಮಾತೇ ಎಲ್ಲರಿಗೂ ವೇದವಾಕ್ಯ. ಆತ ಹೇಳಿದಂತೆ ಎಲ್ಲರೂ ನಡೆದುಕೊಳ್ಳುತ್ತಾರೆ. ಎಲ್ಲರೂ ಹೊಂದಿಕೊಂಡು ಹೋಗುವ ಮನಸ್ಸಿನವರಾಗಿದ್ದರು. ಮತ್ತೆ ಆ ಮನೆಗೆ ಬಂದು ಹೋಗುವವರು ಅನೇಕ ಜನರಿರುತ್ತಾರೆ. ವಿಭಕ್ತ ಕುಟುಂಬದಲ್ಲಿ ಸ್ವಾರ್ಥ ಇರುತ್ತದೆ. ಅವಿಭಕ್ತ ಕುಟುಂಬದಲ್ಲಿ ನಿಸ್ವಾರ್ಥ ಭಾವನೆಯನ್ನ ಕಾಣಬಹುದು. ಬೇರೆ ಬೇರೆ ರೀತಿಯ ಜೀವನವನ್ನು ನಿಭಾಯಿಸಿಕೊಂಡು ಹೋಗುವುದನ್ನ ನೋಡಬಹುದು.

ವೈದೇಹಿಯವರ ಕತೆಗಳಲ್ಲಿ ಚಿತ್ರಣಗೊಂಡ ಕೌಟುಂಬಿಕ ಬದುಕಿನಲ್ಲಿ ಹೆಣ್ಣಿಗೆ ಶಿಕ್ಷಣ, ಉದ್ಯೋಗ, ಮದುವೆ ಎಲ್ಲವೂ ಅನಿವಾರ್ಯ. ಕೌಟುಂಬಿಕ ಬದುಕಿನಲ್ಲಿ ಹಳ್ಳಿಯ ಜೀವನಕ್ರಮಕ್ಕೂ, ನಗರ ಜೀವನ ಕ್ರಮಕ್ಕೂ ವ್ಯತ್ಯಾಸವಿದೆ. ಹಳ್ಳಿಯ ಜೀವನ ಕ್ರಮಕ್ಕೆ ಹೊಂದಿಕೊಂಡ ಹೆಣ್ಣು ನಗರ ಜೀವನದ ಬದುಕನ್ನು ಎದುರಿಸುವ ರೀತಿ ಹೇಗಿದೆ ಎಂದು ನೋಡಬಹುದು.

## ೩.೨ ವಿಭಕ್ತ ಕುಟುಂಬ

ವಿಭಕ್ತ ಕುಟುಂಬದಲ್ಲಿ ಹೆಣ್ಣು ನಿರ್ವಹಿಸುವ ಪಾತ್ರಚಿತ್ರಣವನ್ನ ವೈದೇಹಿಯವರ ಕತೆಗಳಲ್ಲಿ ಚೆನ್ನಾಗಿ ಚಿತ್ರಿಸಿದ್ದಾರೆ. ಒಂದು ಹಳ್ಳಿಯ ಬದುಕನ್ನು 'ಬೀಳುಬೇರು' ಕತೆಯಲ್ಲಿ ಕಾಣಬಹುದು. ಈ ಕತೆಯ ಪ್ರಾರಂಭವೇ ಒಂದು ಎಮ್ಮೆಯನ್ನು ಕೊಂಡುಕೊಳ್ಳುವ ಮಾತುಕತೆ ನಡೆಯುತ್ತಿರುತ್ತದೆ. ಇಲ್ಲಿ ಹಳ್ಳಿಯಲ್ಲಿ

ಕೌಟುಂಬಿಕ ಬದುಕಿಗೆ ಕೃಷಿ ಮುಖ್ಯವಾಗಿರುತ್ತದೆ. ಹಾಗೇ ಒಂದು ಎಮ್ಮೆಯ ಚಿತ್ರಣ ಬರುತ್ತದೆ. ಇಡೀ ಕತೆಯಲ್ಲಿ ಎಮ್ಮೆಯನ್ನು ಕೊಂಡುಕೊಳ್ಳುವುದಕ್ಕೆ ಹುಡುಕಾಟ ನಡೆಯುತ್ತಿರುತ್ತದೆ. ಹಾಗೇ ಜೊತೆ ಜೊತೆಗೆ ತಮ್ಮ ಮಗಳ ಮದುವೆಯ ಮಾತುಕತೆ ಕೂಡ ನಡೆಯುತ್ತದೆ. ಕುಟುಂಬ ಎಂದಾಗ ಕೃಷಿ, ಮದುವೆ, ಶಿಕ್ಷಣ, ಉದ್ಯೋಗ ಎಲ್ಲವೂ ಅನಿವಾರ್ಯ. ಹಾಗಾಗಿ ಮನೆಯ ಯಜಮಾನ ಎಮ್ಮೆ ಕೊಂಡುಕೊಳ್ಳುವ ಯೋಚನೆಯಲ್ಲಿದ್ದರೆ ಯಜಮಾನನ ಹೆಂಡತಿಗೆ ಮಗಳಾದ ಇಂದಿಯ ಮದುವೆ ಮಾಡುವ ಚಿಂತೆ.

ಇಲ್ಲಿ ಗಂಡಸಿಗೆ ಮನೆಯ ಹೊರಗಡೆಯ ವ್ಯವಹಾರದ ಚಿಂತೆಯಾದರೆ, ಮನೆಯ ಹೆಂಗಸಿಗೆ ಮಗಳ ಮದುವೆಯ ಚಿಂತೆ. ಹಾಗಾಗಿ ಎಮ್ಮೆ ಕೊಡಿಸುವ ವೆಂಕ ಬಂದು ಒಂದು ಕಡೆ ಒಳ್ಳೆಯ ಎಮ್ಮೆ ಇದೆ ನೋಡಿ ಬರುವ ಎಂದು ಹೇಳಿದಾಗ ಇಂದಿಯ ಅಪ್ಪ ಕೂಡಲೇ ಒಪ್ಪಿಕೊಳ್ಳುತ್ತಾರೆ. ಮನೆಯಲ್ಲಿರುವ ಎಮ್ಮೆಯನ್ನ ಕೊಟ್ಟಾದರೂ ಬೇರೆ ಎಮ್ಮೆ ತೆಗೆಯಬೇಕು ಎಂಬ ಯೋಚನೆಯಲ್ಲಿದ್ದಾರೆ. ಆದರೆ ತಾಯಿ ಮಾತ್ರ ವೆಂಕನನ್ನು ಈಗ ಬೇಡ ನೀನು ಹೋಗು. ಈ ವರ್ಷ ಬೇಕಾದಷ್ಟು ಖರ್ಚು ಇದೆ ಎಂದು ಹೇಳುತ್ತಾಳೆ. ಈ ವರ್ಷ ಇವಳಿಗೆ ಮದುವೆ ಮಾಡಬೇಕು. ಅದಕ್ಕೆ ದುಡ್ಡು ಬೇಕು ಎಂಬುದಾಗಿ ಹೇಳುತ್ತಾಳೆ. ಹಾಗೆ ಹೇಳಿದರೂ ಬಿಡದ ವೆಂಕ ಮರುದಿನ ಮನೆಗೆ ಬರುತ್ತಾನೆ. ಹಾಲು ಕರೆಯುವ ಮೊದಲೇ ಹೋಗಿ ಎಮ್ಮೆಯನ್ನ ನೋಡಿ ಬರಬೇಕು ಎಂದು. ಹಾಗಾಗಿ ಗಂಡ-ಹೆಂಡತಿಯನ್ನು ಕರೆಯುತ್ತಾನೆ. ಆದರೆ ಹೆಂಡತಿ "ಬಾಗಿಲ ಬಳಿಯಲ್ಲಿ ನಿಂತು 'ಯಾಕೆ ಅಷ್ಟು ಅವಸರ ಮಾಡುವುದು? ಸರಿಯಾಗಿ ವಿಚಾರಿಸಿ ಆ ಮೇಲೆ ಹೋದರಾಗದೆ?' – ಎಂದಳು. 'ಏನಮ್ಮ, ನೀವು ಹೇಳುವುದು? ನನ್ನ ಮೇಲೆ ನಂಬಿಕೆ ಇಲ್ಲವ? ಅಂಥಾ.... ಪೊಟ್ಟು ಮಾಲನ್ನು ನಾನು ನಿಮಗೆ ಹೇಳುತ್ತೇನ? ಎಮ್ಮೆ ಹೇಗಿದೆ ಅಂತೀರಿ? ಹರಾಬೆನ್ನು, ಸುರುಟಿಕೋಡು, ಸುರುಟಿ ಎಮ್ಮೆ ಮಸ್ತು ಹಾಲು ಕೊಡುತ್ತದೆ, ಗೊತ್ತಿದೆಯಾ? ಗಿಡ್ಡ ಕಾಲು, ಕಂಡರೆ ಹೊಟ್ಟೆ ತುಂಬುತ್ತದೆ"[೧]. ಎಂದೆಲ್ಲಾ ಹೇಳುತ್ತಾನೆ. ನಂತರ ವೆಂಕನನ್ನು ನಾಳೆ ಬಾ ಎಂದು ಹೇಳಿ ಕಳಿಸುತ್ತಾರೆ. ಇಲ್ಲಿ ಕೂಡ ಹೆಂಗಸಿಗೆ ಹೊರಗಡೆ ಬಂದು ಮಾತನಾಡುವಷ್ಟು ಧೈರ್ಯವಿಲ್ಲ. ಹಾಗಾಗಿ ಬಾಗಿಲ ಬಳಿಯಿಂದಲೇ ಹೇಳುವಂತದ್ದು. ಹಳ್ಳಿಯ ಹೆಣ್ಣು ಮಕ್ಕಳಿಗೆ ಅದರಲ್ಲಿ ಸಂಪ್ರದಾಯಸ್ಥ ಮನೆತನದ ಹೆಣ್ಣು ಮಕ್ಕಳಿಗೆ ಗಂಡಸರ ನೇರ ನಿಂತು ಮಾತನಾಡುವ ಸ್ವತಂತ್ರವಿರಲಿಲ್ಲ. ಹಾಗೇ ತಾಯಿ ಮತ್ತೂ ಕೂಡ "ಒಳಗಿನಿಂದ 'ತಮಗೆ ಮನಸ್ಸು ಬಂದರೆ ಸರಿ, ಎಂಥದನ್ನಾದರೂ? ಕೊಂಡೇ ಬಿಡುವುದು, ಅದನ್ನೇ ಈಗ ನಾನು ಹೇಳಿದರೆ ಖಂಡಿತಾ ಒಪ್ಪುತ್ತಿರಲಿಲ್ಲ. ಇಷ್ಟು ವರ್ಷವಾದರೂ ತನ್ನ ಮೂಗಿನ ಸರ್ತಕ್ಕೇ ಎಲ್ಲ ನಡೆಯಬೇಕೆಂದರೆ! ದುಡ್ಡೇನು ಹುಣಸೇ ಬೀಜವ? ನೋಡಲು ಹೋಗುವುದು, ದಾಕ್ಷಿಣ್ಯಕ್ಕೆ ಬೀಳುವುದು. ಆ

ವೆಂಕ ನಫೆ ಇಲ್ಲದೆ ಇಲ್ಲಿ ಬಳಿಯುತ್ತಾನ?' – ಎಂತ ಗಟ್ಟಿಯಾಗಿ ನನಗೆ ಕೇಳುವಂತೆ ಇವಳು ಕೂಗುತ್ತಲೇ ಇದ್ದಳು" ಇಲ್ಲೆಲ್ಲಾ ಇಂದಿಯ ತಾಯಿಯ ಮಾತಲ್ಲಿ ಆಕೆಗೆ ಇಷ್ಟು ವರ್ಷ ಮಾತನಾಡುವ ಧೈರ್ಯ ಇಲ್ಲದಿರುವುದು ತಿಳಿಯುತ್ತದೆ. ಯಾಕೆಂದರೆ ಇಷ್ಟು ವರುಷ ಗಂಡ ಹೇಳಿದ್ದನ್ನೇ ಹೆಂಡತಿ ಕೇಳಿಕೊಂಡು ಬರುತ್ತಿದ್ದಳು. ಒಂದು ಕೌಟುಂಬಿಕ ಬದುಕಿನಲ್ಲಿ ಹೆಣ್ಣು ಗಂಡಸಿನ ಅಡಿಯಾಳಾಗಿಯೇ ಇರಬೇಕು ಎಂಬ ಕಟ್ಟುನಿಟ್ಟು ಇತ್ತು.

ಹಾಗೇ ಇಂದಿಯ ಮದುವೆಯ ವಿಚಾರದಲ್ಲಿ ಕೂಡ ತಂದೆ ನೋಡಿದ ವರನನ್ನೇ ಇಂದಿ ಒಪ್ಪಿಕೊಳ್ಳುತ್ತಾಳೆ. ಆಕೆಗೆ ತನ್ನ ಇಚ್ಛೆಯನ್ನ ವ್ಯಕ್ತಪಡಿಸುವ ಧೈರ್ಯವಿಲ್ಲದ್ದರಿಂದ ಇಷ್ಟವಿಲ್ಲದಿದ್ದರೂ ಕೂಡ ತಂದೆ ಹೇಳಿದ ವರನನ್ನೇ ಮದುವೆಯಾಗುತ್ತಾಳೆ. ಇದೇ ರೀತಿಯ ಕತೆ 'ಚಿಪ್ಪು'. ಈ ಕತೆಯಲ್ಲಿ ಯಶೀ ವಿದ್ಯಾವಂತೆ ಆಕೆಗೆ ಕೂಡ ಮದುವೆಯ ಮಾತುಕತೆ ನಡೆಯುತ್ತಿರುತ್ತದೆ. ಆಕೆಗೆ ತನ್ನ ಗಂಡ ಹೀಗೇ ಇರಬೇಕೆಂಬ ಆಸೆ ಇರುತ್ತದೆ. ಆದರೆ ತಂದೆಯೊಂದಿಗೆ ಹೇಳುವ ಧೈರ್ಯವಿಲ್ಲ. ಹಾಗೇ ತಂದೆ ಬೊಂಬಾಯಿ ವರನನ್ನು ಹುಡುಕಿದಾಗ ಈಕೆಗೆ ಮನಸ್ಸಿಲ್ಲದಿದ್ದರೂ ತಂದೆಯ ಮಾತನ್ನು ಧಿಕ್ಕರಿಸಲಾಗದೇ ಸುಮ್ಮನಾಗುತ್ತಾಳೆ. ಆದರೆ ಅದನ್ನ ತಾಯಿಯೊಂದಿಗೆ ಹೇಳುತ್ತಾಳೆ. ಆದರೆ ತಾಯಿಗೆ ಕೂಡ ತನ್ನ ಗಂಡನೊಂದಿಗೆ ಮಾತನಾಡುವ ಧೈರ್ಯವಿರುವುದಿಲ್ಲ. ಹಾಗಾಗಿ ಯಶೀಯ ಇಚ್ಛೆ ಈಡೇರದೆ ತಂದೆ ಹುಡುಕಿದ ಹುಡುಗನೊಂದಿಗೆ ಮದುವೆಯಾಗುತ್ತದೆ. ಇಲ್ಲೆಲ್ಲಾ ಒಂದು ಹಳ್ಳಿಯ ಹೆಣ್ಣುಮಕ್ಕಳು ಗಂಡಸರ ಮುಂದೆ ನಿಂತು ಮಾತನಾಡುವುದಕ್ಕೆ ಭಯ ಪಡುವಂತದ್ದು, ಎಲ್ಲದಕ್ಕೂ ಗಂಡಸರನ್ನೇ ಅವಲಂಬಿಸಿರುವುದನ್ನು ಕಾಣಬಹುದು. ಗಂಡಸರು ಹೇಳಿದಂತೆ ಹೆಂಗಸರು ಕೇಳಿ ಸುಮ್ಮನಾಗುತ್ತಿದ್ದರು. ತಮ್ಮ ಮನಸ್ಸಲ್ಲಿ ಎಷ್ಟೋ ಆಸೆ, ಬಯಕೆಗಳಿದ್ದರೂ ಕೂಡ ಹೊರಗೆಡವದೆ ತಮ್ಮಲ್ಲಿಯೇ ಮುಚ್ಚಿಟ್ಟುಕೊಂಡು, ಬದುಕು ನಡೆಸುತ್ತಿರುತ್ತಾರೆ. ಮನೆಯ ಗಂಡಸರು ಕೂಡ ಮನೆಯ ಹೆಣ್ಣು ಮಕ್ಕಳ ಆಸೆಯನ್ನು, ಮನಸ್ಸಿಚ್ಛೆಯನ್ನು ತಿಳಿಯುವ ಪ್ರಯತ್ನ ಮಾಡುವುದಿಲ್ಲ. ತಾವು ಹೇಳಿದಂತೆ ನಡೆಯಬೇಕೆಂಬ ಹಟ ಅವರಿಗೆ. ಹೀಗೇ ಇದು ಹಳ್ಳಿಯ ಹೆಣ್ಣುಮಕ್ಕಳ ಜೀವನವಾದರೆ, ನಗರದವರ ಜೀವನ ರೀತಿ ಬೇರೆಯೇ ಆಗಿರುತ್ತದೆ. ಕೆಲವು ಹೆಣ್ಣು ಮಕ್ಕಳು ಉದ್ಯೋಗದಲ್ಲಿರುತ್ತಾರೆ. ಅಂತವರು ಧೈರ್ಯದಿಂದಿರುತ್ತಾರೆ. ಉದಾ:– 'ಅವಲಂಬಿತರು' ಕತೆ. ಇಲ್ಲಿ ಬರುವ ಶಾರದೆ ಉದ್ಯೋಗದಲ್ಲಿರುವ ಹೆಣ್ಣು. ಇಲ್ಲಿ ಶಾರದೆ ತನ್ನ ಮನೆಯ ಜವಾಬ್ದಾರಿಯನ್ನ ಹೊರುವವಳಾಗಿದ್ದಾಳೆ. ಶಾರದೆ ಮಗುವನ್ನು ನೋಡಿಕೊಳ್ಳಲು ಒಂದು ಕೆಲಸದವಳನ್ನು ಇಟ್ಟುಕೊಂಡಿರುತ್ತಾಳೆ. ಇಲ್ಲಿ ಶಾರದೆ ಶಿಕ್ಷಣ ಪಡೆದು, ಉದ್ಯೋಗದಲ್ಲಿರುವವಳಾದರೂ ಕೂಡ ಒಂದು ಚಿಕ್ಕ ಹುಡುಗಿಯನ್ನ ಶೋಷಣೆ ಮಾಡುತ್ತಿರುತ್ತಾಳೆ. ಹಳ್ಳಿಯಿಂದ ಮಗು ನೋಡಿಕೊಳ್ಳಲು ಬಂದ ಅಹಲ್ಯ ಎಂಬ

ಚಿಕ್ಕ ಹುಡುಗಿಯನ್ನ ಶಾರದೆ ಶೋಷಣೆ ಮಾಡುತ್ತಾಳೆ. ಅಹಲ್ಯಳಿಗೆ ನಗರದ ಬದುಕು ಇಷ್ಟ. ಅಹಲ್ಯಳಿಗೆ ಅನೇಕ ಚಿಕ್ಕ ಪುಟ್ಟ ಆಸೆಗಳಿರುತ್ತವೆ. ಆದರೆ ಅದನ್ನು ಶಾರದೆ ಈಡೇರಿಸುವುದಿಲ್ಲ.

ಈಗ ಹಳ್ಳಿಯಲ್ಲಿ ಕೂಡ ಹೆಣ್ಣು ಮಕ್ಕಳು ಶಿಕ್ಷಣ ಪಡೆದು, ಉದ್ಯೋಗ ಮಾಡುವ ಆಸೆ ವ್ಯಕ್ತಪಡಿಸುತ್ತಾರೆ. ಆದರೆ ಹಳ್ಳಿಯಲ್ಲಿ ಉದ್ಯೋಗಕ್ಕೆ ಹೋಗುವ ಹೆಣ್ಣನ್ನ ಸರಿಯಾದ ರೀತಿಯಲ್ಲಿ ನೋಡುವುದಿಲ್ಲ. ಹಾಗೇ ಉದ್ಯೋಗಕ್ಕೆ ಹೊರ ಹೋದ ಹೆಣ್ಣಿಗೆ ಮದುವೆಯಾಗುವುದು ಕೂಡ ಕಷ್ಟವಾಗುತ್ತದೆ. ಅದರಲ್ಲೂ ಬಡವರ ಮನೆಯ ಹೆಣ್ಣುಮಕ್ಕಳ ಸ್ಥಿತಿ 'ಪುಟ್ಟಮ್ಮತ್ತೆ ಮತ್ತು ಮೊಮ್ಮಗಳು' ಕತೆಯಲ್ಲಿ ಬರುವ ಕಮಲಾವತಿಯ ಪಾತ್ರ. ಪುಟ್ಟಮ್ಮತ್ತೆ ಎಲ್ಲಾ ಕಷ್ಟವನ್ನು ನೋಡಿದವಳು. ಬಡತನವನ್ನ ಅನುಭವಿಸಿದಳು. ಪುಟ್ಟಮ್ಮತ್ತೆ ಚಿಕ್ಕಂದಿನಲ್ಲೇ ತಾಯಿಯನ್ನು ಕಳಕೊಂಡು ಮತ್ತೇ ಮದುವೆಯಾಗಿ ಗಂಡನನ್ನು ಕೂಡ ಕಳಕೊಂಡು ಮಗಳೊಂದಿಗೆ ಬದುಕುತ್ತಿರುತ್ತಾಳೆ. ಆದರೆ ಕೊನೆಗೆ ಮಗಳು ಹೆರಿಗೆಯಾಗಿ ಸತ್ತಾಗ ಮೊಮ್ಮಗಳನ್ನು ಸಾಕುವ ಜವಾಬ್ದಾರಿಯೂ ಪುಟ್ಟಮ್ಮತ್ತೆಗೆ ಸಿಗುತ್ತದೆ. ಹಾಗೇ ಪುಟ್ಟಮ್ಮತ್ತೆ ಬೇರೆ ಮನೆಯಲ್ಲಿ ಕೆಲಸ ಮಾಡಿ ಮೊಮ್ಮಗಳನ್ನು ಸಾಕುತ್ತಾಳೆ. ಪುಟ್ಟಮ್ಮತ್ತೆಯ ದುಡಿತಕ್ಕೆ ಅಷ್ಟು ದುಡ್ಡು ಸಿಗದಿದ್ದಾಗ ಮೊಮ್ಮಗಳು ಕಮಲಾವತಿ ಅದನ್ನ ವಿರೋಧಿಸುತ್ತಾಳೆ.

"ಅಜ್ಜಿಯದು ಬಾಗಿ ತಾಳಿಕೊಳ್ಳುವ ಗುಣವಾದರೆ ಮೊಮ್ಮಗಳದು ಸೆಟೆದು ಸ್ಥಾಪಿಸಿಕೊಳ್ಳ ಬಯಸುವ ಗುಣ. ಆಕೆಗೆ ಸಿನೆಮಾ ನೋಡುವುದು ಬೇಕು. ಸ್ವಂತ ಕಾಲ ಮೇಲೆ ನಿಂತುಕೊಳ್ಳುವುದು ಬೇಕು. ಒಂದು ಕೆಲಸ ತನಗಿದ್ದರೆ ಅಜ್ಜಿಯನ್ನು ಸಾಕಿಕೊಳ್ಳುತ್ತಿದ್ದೆ. ಅಜ್ಜಿಯ ಮೇಲೆ ತನಗೂ ಪ್ರೀತಿಯಿದೆ ಎಂದು ತೋರಿಸುತ್ತಿದ್ದೆ ಎಂದು ಕೊಳ್ಳುತ್ತಾಳೆ ಕಮಲಾವತಿ"[3]. ಹಾಗಾಗಿ ಆಕೆ ಮನೆಯಿಂದ ಐದು ಮೈಲು ದೂರ ಹೋಗಿ ರೆಡಿಮೇಡ್ ಬಟ್ಟೆ ಹೊಲಿಯುವ ಅಂಗಡಿಯಲ್ಲಿ ಕೆಲಸಕ್ಕೆ ಸೇರುತ್ತಾಳೆ. ಆದರೆ ಅದರಿಂದಾಗಿ ಊರಿನ ಜನರು ಆಕೆಯ ಬಗ್ಗೆ ಕೆಟ್ಟದಾಗಿ ಮಾತನಾಡುತ್ತಾರೆ. ಇದರಿಂದಾಗಿ ಆಕೆಯ ಮದುವೆಗೆ ತೊಂದರೆಯಾಗುತ್ತದೆ. ಆದರೂ ಆಕೆಯ ದುಡಿತಕ್ಕೆ ಸರಿಯಾದ ಪ್ರತಿಫಲ ಸಿಗದೆ ಆಕೆ ನೋವು ಅನುಭವಿಸುತ್ತಾಳೆ. ಬಡವರ ಮನೆಯ ಹೆಣ್ಣುಮಕ್ಕಳ ಸ್ಥಿತಿಯನ್ನ ಶ್ರೀಮಂತರು ಅರ್ಥ ಮಾಡಿಕೊಳ್ಳುವುದಿಲ್ಲ.

ಇನ್ನು ನಗರದಲ್ಲಿ ಜೀವನ ಮಾಡುವ ಹೆಣ್ಣಿನ ಮನಸ್ಥಿತಿ ಬೇರೆಯಾಗಿರುತ್ತದೆ. ತಮ್ಮ ಮನಸ್ಸಲ್ಲೇ ಆಸೆಯನ್ನ ಅದುಮಿಟ್ಟುಕೊಂಡು ಮದುವೆಯಾಗಿ ನಗರಕ್ಕೆ ಬಂದ ಹೆಣ್ಣಿಗೆ ಮತ್ತೆ ತಾನು ಸ್ವಚ್ಛಂದವಾಗಿ ಬದುಕಬೇಕೆಂಬ ಆಸೆಯುಂಟಾಗುತ್ತದೆ. ಅಂತಹ ಆಸೆಯನ್ನ ಕಾರ್ಯರೂಪಕ್ಕೆ ತರುವ ಪ್ರಯತ್ನ ಮಾಡಿದರೂ ಕೂಡ ಕೊನೆಗೆ ಎಲ್ಲಾ ಹೆಣ್ಣುಮಕ್ಕಳಂತೆ ಸಂಸಾರ ಮಾಡುವುದಕ್ಕೆ ಒಪ್ಪಿಕೊಳ್ಳುತ್ತಾರೆ. ಉದಾ:

'ಗೂಡಿನೊಳಗೆ ಒಂದು ಹಕ್ಕಿ', 'ಕಾಣೆಯಾದವರು' ಕತೆಯನ್ನ ನೋಡಬಹುದು. 'ಗೂಡಿನೊಳಗೆ ಒಂದು ಹಕ್ಕಿ' ಕತೆಯಲ್ಲಿ ಸ್ವಚ್ಛಂದವಾದ ಬದುಕನ್ನು ಬಯಸುತ್ತಾಳೆ. ಗಂಡ ಮನೆಯಿಂದ ಹೊರಗಡೆ ಹೊರಡುವಾಗ ಮಾಲತಿ ಗಂಡನೊಂದಿಗೆ ಬಾಗಿಲಿಗೆ ಬೀಗಹಾಕಿಕೊಂಡು ಹೋಗಲು ಹೇಳುತ್ತಾಳೆ. ಹಾಗೇ ಪತಿ-ಪತ್ನಿಯರ ನಡುವೆ ಪ್ರಶ್ನೋತ್ತರ ರೀತಿಯ ಸಂಭಾಷಣೆಗಳು ನಡೆದು ಕೊನೆಗೆ ಗಂಡ ಹೋಗುವಾಗ ಬಾಗಿಲಿಗೆ ಬೀಗ ಹಾಕಿಕೊಂಡು ಹೋಗುತ್ತಾನೆ.

ಹಾಗೇ ಗಂಡ ಹೋದ ಬಳಿಕ ಮಾಲತಿ ಇವತ್ತು ತಾನು ಸ್ವತಂತ್ರಳು ಎಂದು ಸಂತೋಷಪಟ್ಟು ತನಗೆ ಬೇಕಾದ ಹಾಗೇ ಸ್ವಚ್ಛಂದವಾಗಿ ಇರುತ್ತಾಳೆ. ಆದರೆ ಆಕೆಗೆ ಕೊನೆಗೆ "ತಿರುಗಾಡುತ್ತಿದ್ದಂತೆ ತಾನು ಬೋನಿಗೆ ಹಾಕಿದ ಹುಲಿಯಂತೆ ಅನಿಸಿತು. ಸುತ್ತಲಿನ ಗೋಡೆಗಳು ಪಂಜರದ ಗೋಡೆಗಳಂತೆ ಕಂಡವು. ಪಂಜರದ ಹುಲಿಯಾದರೂ ತನಗೆ ಬೇಕೆಂಬಷ್ಟು ಕೂಗಿಯಾದರೂ ಕೂಗಬಹುದು. ತನಗೆ ಅದೂ ಸಾಧ್ಯವಿಲ್ಲ. ಸದ್ದಿಲ್ಲದೆ ತಾನು ಹೇಗೆ ಇರಲಿ! ಉಸಿರು ಕಟ್ಟುತ್ತಿದೆ ತನಗೆ! ತಾನೇ ಬೇಕೆಂತ ಕಲ್ಪಿಸಿಕೊಂಡ ಈ ವಾತಾವರಣದಲ್ಲಿ ತೆಪ್ಪಗೆ ಓದುತ್ತ ಕೂಡುವುದು ಸಪ್ಪೆ ಪ್ರತಿಕ್ರಿಯೆ ಅನಿಸಿತು. ಸಂಜೆ ಅವ ಬಂದು ಕೇಳಿದರೆ ಹೊಟ್ಟೆ ಹಿಡಿದು ನಕ್ಕಾನು. ಈ ನಾಲ್ಕು ಗೋಡೆಯೊಳಗೆ ತಾನು ಹೇಗೆ ತಿರುಗಿದರೇನು?! ತಿರುಗುವ ಸಂತೋಷ, ಬಂಧನವೇ ಇಲ್ಲದ ಸಂತೋಷ ತಾನು ಪಡೆಯಬೇಕಾದರೆ ಬಾಗಿಲು ತೆರೆದು ಬೀದಿಗಿಳಿಯಬೇಕು. ಮೈ ಬೀಸಾಗಿ ನಡೆದು ಹೋಗಬೇಕು. ಬೇಕಾದಂತೆ ಓಡಿಯಾಡಬೇಕು ಫ್ರೀಯಾಗಿ ಓಡಾಡುವುದನ್ನು ಹರಿಣ ಮುದುಕಿ ಹುಡುಗ ಎಲ್ಲ ನೋಡಬೇಕು"[೪]. ಹೀಗೆ ಯೋಚಿಸುತ್ತಾಳೆ ನಂತರ ಆಕೆ ಸ್ವಚ್ಛಂದವಾಗಿ ಬದುಕಬೇಕೆಂಬ ಆಸೆಯನ್ನ ಬಿಟ್ಟು ತನ್ನ ಗಂಡನ ಬರುವಿಕೆಗಾಗಿ ಕಾದು ಕೂರುತ್ತಾಳೆ.

ಬಡತನ ಹೆಣ್ಣನ್ನು ಬದಲಾಯಿಸುವ ರೀತಿಯನ್ನ 'ಒಂದು ಕಳ್ಳ ವೃತ್ತಾಂತ' ಕತೆಯಲ್ಲಿ ಕಾಣಬಹುದು. ಈ ಕತೆಯಲ್ಲಿ ಬರುವ ಬಚ್ಚಮ್ಮ ಹುಟ್ಟಿನಿಂದ ಕಳ್ಳಿಯಲ್ಲ. ಆಕೆ ಬಡವರ ಮನೆಯ ಹೆಣ್ಣು. ಬಡತನದಲ್ಲಿಯೇ ಬೆಳೆದು ದೊಡ್ಡವಳಾದಳು. ಮದುವೆಯಾದ ಮೇಲೆ ಯಾದರೂ ಸುಖಸಿಗಬಹುದು ಎಂದು ಆಕೆ ಆಸೆ ಪಟ್ಟಳು. ಹೆತ್ತವರಿಗೂ ಕೂಡ ಆಕೆಯನ್ನ ತಮಗಿಂತ ಚೆನ್ನಾಗಿರುವ ಮನೆಗೆ ಕೊಡಬೇಕೆಂಬ ಆಸೆ. ಹಾಗೇ ಒಂದು ದಿನಸೀ ಅಂಗಡಿಯಲ್ಲಿ ಕೆಲಸಕ್ಕಿದ್ದ ವಾಚಣ್ಣನನ್ನು ನೋಡಿ "ಅಂಗಡಿಯಲ್ಲಿ, ಅದೂ ದಿನಸಿ ಅಂಗಡಿಯಲ್ಲಿ, ಕೆಲಸ ಮಾಡುತ್ತಾನೆ ಎಂದ ಮೇಲೆ ಸಂಬಳ ಮಾತ್ರವಲ್ಲ, ಕೈ ಕಣ್ಣು ಚುರುಕಿದ್ದರೆ ಸಂಬಳದಡಿಯ ಆದಾಯವೇ ಹೆಚ್ಚಿಗೆ ಇರಬಹುದು. ಕೊನೆಗೆ ಊಟ ತಿಂಡಿಗಂತೂ ಎಂದಿಗೂ ಕೊರತೆ ಇರದು ಎಂದು ಅಂದಾಜು ಮಾಡಿದ್ದರು"[೫]. ಹಾಗಾಗಿ ಆತನಿಗೆ ಮದುವೆ ಮಾಡಿಕೊಡುತ್ತಾರೆ. ಆದರೆ

ಮದುವೆಯಾಗಿ ಬಂದ ಮೇಲೆ ಬಚ್ಚಮ್ಮನಿಗೆ ಚೆನ್ನಾಗಿ ಉಂಡುಟ್ಟು ಬದುಕಬೇಕು ಎಂದು ಆಸೆ ಪಟ್ಟವಳಿಗೆ ಇಲ್ಲಿ ಕೂಡ ಅದು ಸಾಧ್ಯವಿಲ್ಲ ಎಂದಾಯಿತು. ಆಕೆಗೆ ಎಲ್ಲರಂತೆ ಚೆನ್ನಾಗಿ ಉಂಡು ತಿಂದು ಜೀವಿಸಬೇಕೆಂಬ ಆಸೆ. "ಊರವರು ಹತ್ತು ರೀತಿಯಲ್ಲಿ ಅದೂ ಇದೂ ಮಾಡಿ ತಿಂದು ತಣಿಯುವಾಗ ತಾವು ಅರ್ಧ ರೀತಿಯಲ್ಲಾದರೂ ತಣಿಯದಿದ್ದರೆ? ತಿನ್ನುವ ಪ್ರಾಯದಲ್ಲಿ ತಿನ್ನಬೇಕು. ಹೇರಳವಲ್ಲವಾದರೂ, ಎಲ್ಲಾದರೊಮ್ಮೆ ಒಂದು ಚೂರು ಬಂಗಾರ ಅಂತ ಮಾಡಿಸಬೇಕು. ಆಗ ಬದುಕಲು ಉಮೇದು ಹುಟ್ಟೀತು ಇದೇ? ಏನಿಲ್ಲ! ದುಡಿದದ್ದೆಲ್ಲ ನಿತ್ಯದ ಬೋಳು ಅಡಿಗೆಗೇ ಸೈ. ಒಮ್ಮೊಮ್ಮೆ ಅದಕ್ಕೂ ಹರಹರ, ಹೀಗೆ ನಾಯಿ ನರಿಗಳು ಬದುಕುವುದಿಲ್ಲವೆ? ಎಂಟಾಣೆ ಕೇಳಿದರೆ ನಾಲ್ಕಣೆಯನ್ನು ತಿಕ್ಕಿ ತಿಕ್ಕಿ ಕೊಡುವ ಗಂಡ. ದುಡ್ಡು ಇದ್ದರೂ ಇಲ್ಲದಿದ್ದರೂ ಅವನ ಜಾಯಮಾನವೇ ಹಾಗೆ. ದುಡ್ಡೊಂದು ಬಗೆ ಕೇಳದಿದ್ದರೆ, ತಂದು ಹಾಕಿದ್ದರಲ್ಲಿ ಉಸಿರೆತ್ತದ, ಏನೆಂದರೆ ಅದನ್ನು ಅಟ್ಟು ಇಟ್ಟರೆ ಆತ ಬಹಳ ಒಳ್ಳೆಯವನೇ! ಇದು ಎಂತಹಾ ಸಂಬಂಧಕ್ಕೆ ಕೊಟ್ಟುಬಿಟ್ಟರು ತನ್ನನ್ನು! ಬಚ್ಚಿಯ ಜಾನಕ್ಕೆ ಕೊನೆಯಿಲ್ಲವಾಯಿತು"[೬]. ಹೀಗೆ ಆಕೆ ನಾಲ್ಕು ಮಕ್ಕಳ ತಾಯಿಯಾದಳು. ನಂತರ ಆಕೆ ಮಕ್ಕಳ ಹೊಟ್ಟೆ ತುಂಬಿಸುವುದಕ್ಕಾಗಿ ಕರೆದವರ ಮನೆಗೆ ಒಳಗಿನ ಕೆಲಸಕ್ಕೆ ಹೋಗುತ್ತಾಳೆ.

ಆಕೆ ತುಂಬಾ ಸಲ ವಾಚಣ್ಣನಿಗೆ ತನ್ನ ಆಸೆಯನ್ನ ಹೇಳುತ್ತಾಳೆ. ಜೀವನದಲ್ಲಿ ಒಂದು ಸಲನಾದ್ರು ಚೆನ್ನಾಗಿ ತಿಂದು ತೃಪ್ತಿಪಡೆಯಬೇಕು. ಹಾಗಾಗಿ ಆಕೆ ಇರುವ ಒಂದು ಚಿನ್ನದ ಕರಿಮಣಿಯನ್ನ ಕೊಡುತ್ತೇನೆ. ಅದನ್ನು ಮಾರಿ ಸಣ್ಣದೊಂದು ಅಂಗಡಿ ಇಡಿ ಎಂದು. ಆದರೆ ಅದಕ್ಕೆ ವಾಚಣ್ಣ ಒಪ್ಪುವುದಿಲ್ಲ. ಆತ ಚಿಕ್ಕಂದಿನಿಂದ ಇದ್ದ ಅಂಗಡಿಯ ಕಾಮತರಿಗೆ ಮೋಸಮಾಡುವುದು ಸರಿಯಲ್ಲ ಎಂದು ಹೇಳಿ ಆಕೆಯ ಮಾತನ್ನು ಕೇಳುವುದಿಲ್ಲ. ಹಾಗಾಗಿ ಆಕೆಗೆ ಬೇಸರವಾಗುತ್ತದೆ. ಕಾಮತರು ಈತನನ್ನು ಚೆನ್ನಾಗಿ ನೋಡಿಕೊಳ್ಳುತ್ತಾರೆ. ತಮ್ಮ ಮನೆಯಲ್ಲಿ ಏನಾದರೂ ಸಮಾರಂಭ ಇದ್ದರೆ ಈತನನ್ನು ಕೂಡ ಊಟಕ್ಕೆ ಕರೆಯುತ್ತಾರೆ. ಈತನ ಹೊಟ್ಟೆ ತುಂಬುವಷ್ಟು ಊಟ ಹಾಕುತ್ತಾರೆ. ಆದರೆ ಈತನ ಸಂಸಾರಕ್ಕೆ ಏನು ಕೊಡುವುದಿಲ್ಲ. ಚೆನ್ನಾಗಿ ತಿಂದು ಮನೆಗೆ ಬಂದ ವಾಚಣ್ಣ ಕಾಮತರ ಹೆಂಡತಿಯ ಅಡುಗೆಯನ್ನು ಹೊಗಳುತ್ತಾನೆ. ಇದರಿಂದ ಬೇಸರಗೊಂಡ ಬಚ್ಚಮ್ಮ ಒಂದು ದಿನ ನಾಗವೇಣಮ್ಮನ ಮನೆಗೆ ಕೆಲಸಕ್ಕೆ ಹೋಗಿದ್ದಾಗ ಆ ಮನೆಯೊಳಗೆ ಯಾರೂ ಇಲ್ಲದ್ದರಿಂದ ಆಕೆ ಸ್ವಲ್ಪ ಗೋಡಂಬಿ ಮತ್ತು ದ್ರಾಕ್ಷಿ ಕದ್ದು ತಂದು ಪಾಯಸ ಮಾಡುತ್ತಾಳೆ. ಅದನ್ನು ವಾಚಣ್ಣ ತಿನ್ನುತ್ತಾನೆ. ಆದರೆ ಗೋಡಂಬಿ ದ್ರಾಕ್ಷಿ ಎಲ್ಲಿಂದ ಬಂತು ಎಂಬ ಪ್ರಶ್ನೆ ಹಾಕುವುದಿಲ್ಲ. ಆಕೆಗೆ ಕದಿಯಬಾರದು ಎಂಬುದಾಗಿ ಬುದ್ಧಿ ಹೇಳುತ್ತಾನೆ. ಆದರೆ ಈತ ಏನನ್ನೂ ತಂದುಕೊಡುವುದಿಲ್ಲ. ಕದ್ದು ತಂದು ಅಡುಗೆ ಮಾಡಿದ್ದನ್ನ ಚೆನ್ನಾಗಿ ತಿನ್ನುತ್ತಾನೆ. ಆದರೆ "ಬಚ್ಚಮ್ಮನ

ಜಾಯಮಾನವೇ ಈ ರೀತಿಯ ಕಳ್ಳಧೋರಣೆಯದಲ್ಲ. ಅವಳು ಕಳ್ಳಿಯಾದರೆ ಪ್ರತ್ಯಕ್ಷ ಕಳ್ಳಿಯೇ. ತಾನು ಕದಿಯೆ. ಇನ್ನೊಬ್ಬರು ಕದ್ದ ಸುಖವನ್ನು ಅನುಭವಿಸಲು ಅಡ್ಡಿಯಿಲ್ಲ ಎಂಬಂಥದಲ್ಲ"[೭]. ಅಂದರೆ ಒಳ್ಳೆಯವನಾಗಿದ್ದರೆ ಕದ್ದು ತಂದದ್ದನ್ನು ತಿನ್ನಬಾರದು. ಆದರೆ ವಾಚಣ್ಣ ಹಾಗಲ್ಲ ಹೊರಗಡೆ ಒಳ್ಳೆಯವನು. ಆತ ಕದಿಯುವುದಿಲ್ಲ ಅಷ್ಟೆ. ತಿನ್ನುತ್ತಾನೆ. ಹಾಗೇ ಬೇರೆ ಅಂಗಡಿ ಕೂಡ ಮಾಡಲು ಒಪ್ಪುವುದಿಲ್ಲ. ಕಾಮತರು ತನ್ನನ್ನು ಮಗನೆಂದು ಭಾವಿಸಿದ್ದಾರೆ. ಹಾಗಾಗಿ ಅವರಿಗೆ ಮೋಸ ಮಾಡುವುದು ಇಷ್ಟವಿಲ್ಲ. ಈಕೆಯೇ ಬೇರೆಯವರ ಮನೆಯಲ್ಲಿ ದುಡಿದು ಮಕ್ಕಳ ಹೊಟ್ಟೆ ತುಂಬಿಸುವ ಪ್ರಯತ್ನ ಮಾಡುತ್ತಾಳೆ. ಹಾಗೆ ಒಂದು ದಿನ ಕದ್ದು ಸಿಕ್ಕಿಬೀಳುತ್ತಾಳೆ. ಇದರಿಂದ ಬೇಸರಗೊಂಡ ಮಗ ಮಂಜುನಾಥ ಓಡಿಹೋಗಿ ಬೇರೆ ಊರಲ್ಲಿ ಒಂದು ಹೋಟೆಲಲ್ಲಿ ಕೆಲಸಕ್ಕೆ ಸೇರುತ್ತಾನೆ. ಕೆಲವು ದಿನಗಳ ಬಳಿಕ ಚಿಕ್ಕಂದಿನ ಗೆಳೆಯ ಯಜ್ಞೇಶನ ಮದುವೆಗೆಂದು ಬಂದ ಮಂಜುನಾಥ ನಗರದಲ್ಲಿ ಹೋಟೆಲಿಟ್ಟು ನಿಮ್ಮನ್ನೆಲ್ಲಾ ಸಾಕುತ್ತೇನೆ ಎಂಬ ಆಸೆಯನ್ನ ತಿಳಿಸುತ್ತಾನೆ. ಯಜ್ಞೇಶನ ಮದುವೆಯಲ್ಲಿ ನರಸಿಂಹರಾಯ ತನ್ನ ತಾಯಿಗೆ ಮಾಡಿದ ಅವಮಾನದಿಂದಾಗಿ ಬೇಸರಗೊಂಡು ಅಲ್ಲಿ ಬೆಳ್ಳಿಯ ಪಾತ್ರೆಯನ್ನು ಕದಿಯುತ್ತಾನೆ. ಇದನ್ನ ತಿಳಿದ ತಾಯಿ ಬಚ್ಚಮ್ಮ ಮಗನನ್ನು ಹರಸಿ ಬೇರೆ ಊರಿಗೆ ಕಳಿಸಿ ಕೊಡುತ್ತಾಳೆ. ಈ ಕತೆಯಲ್ಲಿ "ಹಸಿದವರ ಎದುರು ಉಂಡವರ ತೇಗಿನ ತೇಂಕಾರವನ್ನು ವಿಮರ್ಶಿಸುತ್ತಾರೆ. ತಿಮ್ಮರಾಯರ ಹೆಂಡತಿ, ಗಜಾನನಭಟ್ಟ, ಕಾಮತರು ಇವರೆಲ್ಲರ ಔದಾರ್ಯತೆ ಇಲ್ಲದ ಅಮಾನವೀಯ ವರ್ತನೆಯೇ ಹಸಿದ ಬಚ್ಚಮ್ಮನಂಥವರನ್ನು ಕಳ್ಳಿಯನ್ನಾಗಿ ಮಾರ್ಪಡಿಸುತ್ತದೆ"[೮].

ಹೀಗೆ ಒಂದು ಹಳ್ಳಿಯ ಬಡ ಹೆಣ್ಣು ಬದುಕುವುದಕ್ಕಾಗಿ ತನ್ನ ಮಕ್ಕಳ ಹೊಟ್ಟೆ ತುಂಬಿಸುವ ಕಾರಣದಿಂದ ಕಳ್ಳಿಯಾಗುತ್ತಾಳೆ. ಆದರೂ ಅದಕ್ಕೆ ಕಾರಣ ಶ್ರೀಮಂತರು. ಅವರ ಮನೆಗೆ ಕೆಲಸಕ್ಕೆ ಹೋದಾಗ ಆಕೆಗೆ ತಿನ್ನಲು ಸರಿ ಕೊಡದ ಕಾರಣ ಆಕೆ ಕದಿಯುತ್ತಾಳೆ. ಹೀಗೆ ಬಡವರ ಕಷ್ಟಕ್ಕೆ ಶ್ರೀಮಂತರು ಸ್ಪಂದಿಸದೇ ಇರುವುದೇ ಇಂತಹ ಬಚ್ಚಮ್ಮಳಂತಹವರ ಸ್ಥಿತಿಗೆ ಕಾರಣವಾಗುತ್ತದೆ.

ಕೌಟುಂಬಿಕ ಬದುಕಿನಲ್ಲಿ ಹೆಣ್ಣು ಶಿಕ್ಷಣ, ಉದ್ಯೋಗ ಪಡೆದಿದ್ದರೂ ಕೂಡ ಗಂಡನನ್ನು ಬಿಟ್ಟು ಬದುಕುವುದು ಆಕೆಯಿಂದ ಸಾಧ್ಯವಾಗುವುದಿಲ್ಲ. ಹೀಗೆ ಹಳ್ಳಿಯ ಹೆಣ್ಣು ಮಕ್ಕಳು ಮತ್ತು ನಗರದಲ್ಲಿ ಬದುಕು ನಡೆಸುವ ಹೆಣ್ಣುಮಕ್ಕಳ ಸ್ಥಿತಿ ಕೂಡ ಒಂದೇ ತರದ್ದು. ನಗರದಲ್ಲಿ ಬದುಕುವ ಹೆಣ್ಣು ಮಕ್ಕಳು ಬದಲಾಗುವ ಯೋಚನೆ ಮಾಡಿದರೂ ಕೂಡ ಅದು ಸಾಧ್ಯವಾಗದೇ ಕೊನೆಗೆ ತಮ್ಮ ಸಂಸಾರವನ್ನ ಬಿಟ್ಟು ಬಿಡಲಾಗದೆ ಒಪ್ಪಿಕೊಳ್ಳವುದನ್ನ ಈ ಕತೆಗಳಲ್ಲಿ ಕಾಣಬಹುದಾಗಿದೆ.

'ಆತ' ಈ ಕತೆಯಲ್ಲಿ ಬರುವ ಸುಮನಳಿಗೆ ತನ್ನ ಗಂಡನಾದ ಮನೀಷನೊಂದಿಗೆ ಬಾಳಲು ಇಷ್ಟವಿಲ್ಲದಿದ್ದರೂ ಆತನೊಂದಿಗೆ ಜೀವನ ಮಾಡಬೇಕಾದ ಪರಿಸ್ಥಿತಿ. ಹಾಗಾಗಿ ಮನೀಷ ಸುಮನಳನ್ನ ಬಸ್ಸಿಗೆ ಹತ್ತಿಸಿ ಸಿಗರೇಟು ತರಲು ಹೋಗುತ್ತಾನೆ. ಸುಮನ ಎಲ್ಲಾ ಸಾಮಾನುಗಳನ್ನು ಜೋಡಿಸಿಟ್ಟುಕೊಳ್ಳುತ್ತಾಳೆ. ಮನೀಷ ಇನ್ನು ಬಂದಿಲ್ಲ ಎಂದು ನೆನೆಸಿ ಹೊರಗಡೆ ನೋಡಿದಾಗ ಎರಡು ಕಣ್ಣುಗಳು ತನ್ನನ್ನೆ ದೃಷ್ಟಿಸುತ್ತಿರುವುದು ಕಂಡು ಎಲ್ಲಿಯೋ ಹತ್ತಿರದಲ್ಲಿ ನೋಡಿದ ನೆನಪು. ಆದರೆ ಆಕೆಗೆ ಹಿಂದೆ ತಾನು ನೋಡಿದ ಅನೇಕ ಪರಿಚಯದವರ ನೆನಪು ಮಾಡಿಕೊಳ್ಳುತ್ತಾಳೆ. ಆದರೆ ಇದು ತಾನು ಕಂಡ ಆ ಕಣ್ಣುಗಳು ಎಂದು ಅನಿಸುತ್ತದೆ. ನಂತರ ತಾನು ಇಂಟರ್‌ವ್ಯೂಗೆ ಹೋಗಿದ್ದಾಗ ಕಂಡ ಹುಡುಗನಿರಬಹುದು ಎಂದು ಯೋಚಿಸುತ್ತಾಳೆ. ಹೀಗೆ ತನಗೆ ಪರಿಚಯದವರ ನೆನಪು ಮಾಡಿಕೊಂಡು ಕೊನೆಗೆ ಅವರು ಯಾರೂ ಅಲ್ಲ ಎಂದು ಸುಮ್ಮನೆ ಕೂರುತ್ತಾಳೆ. ನಂತರ ಅವ ಹೇಗಿದ್ದಾನೆ ಎಂಬ ಕುತೂಹಲಕ್ಕಾಗಿ ಪುನಃ ಆತನನ್ನು ನೋಡುತ್ತಾಳೆ "ಅಷ್ಟೇನೂ ಚಂದ ಇದ್ದಂತಿಲ್ಲ. ಮೂಗು ಕೊಂಚ ಓರೆ. ಕಣ್ಣ ಬಳಿ ಕಪ್ಪು ಕಲೆಯಿದೆ. ಕಿವಿ ಪೂರಾ ಹಿಂದೆಯೇ ಹೋಗಿದೆ. ಬರೀ ಕಿರಿದು ಎದೆ. ಒರಗಲು ವಿಶಾಲ ಎದೆಯೇ ಇಲ್ಲದ ಮೇಲೆ! ಕಣ್ಣೀರು ಸುರಿಸುವ ಎಂದರೆ ಭುಜಗಳು ಇಳಿಜಾರು. ಬಿದ್ದ ಹನಿಗಳು ಅಲ್ಲೇ ಸ್ವಲ್ಪ ಕಾಲವೂ ಇಂಗಿತ ತಿಳಿಸಲು ನಿಲ್ಲುವಂತಿಲ್ಲ. ಪುಸಕ್ಕನೆ ಜಾರಿಯಾವು"[೯]. ಆತ ಯಾರಿರಬಹುದು ಎಂದು ಸುಮನ ಮತ್ತು ಯೋಚಿಸುತ್ತಾಳೆ. ಮನೀಷನ ಮೊದಲು ತನ್ನನ್ನು ನೋಡಲು ಬಂದವರಿರಬಹುದು ಅಥವಾ ವಿಮಲಳ ಗಂಡನಿರಬಹುದು ಎಂದೆಲ್ಲಾ ಯೋಚಿಸುತ್ತಾಳೆ. ಆದರೆ ಆತ ಇನ್ನೂ ಈಕೆಯನ್ನೇ ದೃಷ್ಟಿಸುತ್ತಿರುವುದು ಕಂಡು ಸುಮನಳಿಗೆ ಮುಜುಗರವಾಗುತ್ತದೆ. ಆಗ ಈಕೆ ಮನೀಷ ಬೇರೆ ಹತ್ತಿರವಿಲ್ಲ ಎಂದು ನೆನೆಸಿ ಮನೀಷನ ಬಗ್ಗೆ ಯೋಚಿಸುತ್ತಾಳೆ. "ಅಂದ ಹಾಗೆ ಮನೀಷನನ್ನು ನೆನೆಸಿಕೊಂಡರೆ ಯಾಕೆ ತನಗೆ ರೋಮಾಂಚನವಾಗುವುದಿಲ್ಲ? ದೇಹ ಕಂಪಿಸುವುದಿಲ್ಲ? ಮುಖದಲ್ಲಿ ರಕ್ತ ನುಗ್ಗುವುದಿಲ್ಲ? ಎರಡು ಮೂರು ದಿನಗಳಿಂದ ಒಟ್ಟಿಗಿದ್ದರೂ ಅವನ ಮುಖವೇಕೆ ನೆನೆಸಿದರೂ ಕಣ್ಣ ಮುಂದೆ ಸ್ಪಷ್ಟವಾಗಿ ಬರುವುದಿಲ್ಲ?"[೧೦] ಹೀಗೆಲ್ಲಾ ಯೋಚಿಸುವ ಸುಮನ ಕೊನೆಗೆ ಮನೀಷ ಧೈರ್ಯ ಮಾಡುತ್ತಿರಲಿಲ್ಲ ಎಂದೆಲ್ಲಾ ಯೋಚಿಸುತ್ತಾಳೆ. ಕೊನೆಗೆ ಮನೀಷನನ್ನೇ ಗಂಡನೆಂದು ಒಪ್ಪಿಕೊಳ್ಳುತ್ತಾಳೆ. ಸುಮನಳಿಗೆ ಮನೀಷನನ್ನು ಮೊದಲು ಗಂಡನೆಂದು ಮನಃಪೂರ್ವಕವಾಗಿ ಒಪ್ಪಿಕೊಳ್ಳಲಾಗದಿದ್ದರೂ ಕೊನೆಗೆ ಒಪ್ಪಿಕೊಳ್ಳಲೇಬೇಕಾದ ಅನಿವಾರ್ಯ ಬರುತ್ತದೆ. ಹಾಗಾಗಿ "ಅವನಿಗೊರಗಿ ಕುಳಿತ ಸುಮನಳ ಕಣ್ಣುಗಳಿಂದ ಒಂದೇ ಸವನೆ ನೀರು ಹರಿಯುತ್ತದೆ. ಅದು ಅವನ ಹೆಗಲಿಳಿದು ಜಾರಿ ಹೋಗುತ್ತಲೇ ಇದೆ ಸದ್ದುಗದ್ದಲವಿಲ್ಲದೆ"[೧೧] ಇಲ್ಲಿ ಸುಮನಳಿಗೆ ಮನೀಷನನ್ನು ಇಷ್ಟವಿಲ್ಲದಿದ್ದುದರಿಂದ ತನ್ನನ್ನು

ದೃಷ್ಟಿಸುತ್ತಿದ್ದ ಕಣ್ಣುಗಳು ಆತನದೇ ಎಂದು ಗೊತ್ತಾಗಲೇ ಇಲ್ಲ. ಆದರೆ ಕೊನೆಗೆ ಅದೇ ಕಣ್ಣುಗಳನ್ನು ಬೇಡವೆಂದರೂ ನೋಡುತ್ತಿರೋಣ ಅನಿಸುತ್ತದೆ.

'ಕಾಣೆಯಾದವರು' ಕತೆಯಲ್ಲಿ ಕುಸುಮಾಳಿಗೆ ತನ್ನ ಗಂಡನೊಂದಿಗೆ ಬದುಕುವುದಕ್ಕೆ ಇಷ್ಟವಿಲ್ಲ. ಹಾಗಾಗಿ ತನ್ನ ಗಂಡ ಮನೆಯಲ್ಲಿಯೇ ಇದ್ದರೂ ಕೂಡ 'ಕಾಣೆಯಾಗಿದ್ದಾರೆ' ಎಂದು ಸುಳ್ಳು ನುಡಿಯುತ್ತಾಳೆ. ಕುಸುಮ ಲತಾಳಿಗೆ ದೂರವಾಣಿ ಕರೆ ಮಾಡಿ ನನ್ನ ಗಂಡ ಮನೆಯಿಂದ ಹೊರಟು ಹೋಗಿದ್ದಾರೆ ಎಂದು ದು:ಖದಿಂದ ನುಡಿಯುತ್ತಾಳೆ. ಮತ್ತೆ "ಹೆದರಿದ ದನಿಯಲ್ಲಿ ತಡವರಿಸುತ್ತ ನುಡಿದಳು ಕುಸುಮಾ 'ಅಷ್ಟೇ ಅಲ್ಲ...... ಇವರ ಖಾಸಾ ಸಂಬಂಧಿಯಂತೆ ಒಬ್ಬ ಬಂದಿದ್ದಾನೆ. ಸಂಬಂಧಿಕ ಅಲ್ಲ ಅನ್ನುವ ಹಾಗಿಲ್ಲ ...... ಏನು ಮಾಡುವುದು ಅಂತ ತಿಳಿಯುತ್ತಿಲ್ಲ. ಹೊರಟು ಹೋಗು ಎನ್ನಲು ತನ್ನಿಂದ ಸಾಧ್ಯವಿಲ್ಲ. ಊರಲ್ಲೆಲ್ಲ ನಡೆಯುವ ಸಂಗತಿ ಕೇಳಿದರೂ ಸಾಕು, ಭಯ ಕವುಚಿಕೊಳ್ಳುತ್ತದೆ. ಅಂಥಲ್ಲಿ ಇವ ಒಬ್ಬ ಎಲ್ಲಿಂದ ತಯಾರಾದ ಹೇಳು. ಅದು ಹೇಗೆ ಅಷ್ಟು ಧೈರ್ಯವಾಗಿ ಮನೆಯೊಳಗೆ ಬಂದು ಪ್ರತಿಷ್ಠಾಪನೆ ಆದ! ಇಷ್ಟಕ್ಕೂ ಗಂಡನಿಲ್ಲದ ವೇಳೆ' ಅಂತೆಲ್ಲ ಬಿಕ್ಕಿದಳು"[೧೨]. ಇಲ್ಲಿ ತನ್ನ ಗಂಡನನ್ನೆ ಆಕೆ ಗಂಡನ ಸಂಬಂಧಿ ಎಂಬುದಾಗಿ ಭಾವಿಸುತ್ತಾಳೆ. ಅಂದರೆ ಆತನನ್ನು ಗಂಡ ಎಂಬುದಾಗಿ ಒಪ್ಪಿಕೊಳ್ಳಲು ಆಕೆಯ ಮನಸ್ಸು ಒಪ್ಪುವುದಿಲ್ಲ. ಹಾಗಾಗಿ ಆತನನ್ನು ಅಪರಿಚಿತನಂತೆ ಕಾಣುತ್ತಾಳೆ. ಅದನ್ನ ಹಾಗೇ ಲತಾಳಿಗೆ ಹೇಳುತ್ತಾಳೆ. ಅದಕ್ಕೆ ಲತಾ ಪೋಲಿಸ್ ಕಂಪ್ಲೆಂಟ್ ಕೊಡು, ಮನೆಗೆ ತಿಳಿಸು ಎಂದಾಗ ಅದಕ್ಕೆ ಆಕೆ ಒಪ್ಪುವುದಿಲ್ಲ. ನೀನು ಬಾ ಎಂಬುದಾಗಿ ಹೇಳುತ್ತಾಳೆ. ಆದರೆ ಮದುವೆಯಾಗಿ ನಾಲ್ಕು ವರುಷ ಅವರು ತುಂಬಾ ಚೆನ್ನಾಗಿದ್ದರು. ಈವಾಗ ಏನಾಯಿತು ಗೊತ್ತಿಲ್ಲ. ಆದರೆ ಕುಸುಮಾಳಿಗೆ ಯಾವುದೋ ಕಾರಣಕ್ಕೆ ಗಂಡನ ಮೇಲೆ ಅತೃಪ್ತಿ ಇದೆ. ಹೀಗೆ ಲತಾ ಕುಸುಮಾಳ ಮನೆಗೆ ಬರುವಾಗ ಬೆಳಗ್ಗೆಯ ಜಾವ. ಬಾಗಿಲು ತಟ್ಟಿದಾಗ ಕುಸುಮಾಳ ಗಂಡನೇ ಬಂದು ಬಾಗಿಲು ತೆಗೆಯುತ್ತಾನೆ. ಕುಸುಮಾ ಮಲಗಿದ್ದಾಳೆ ಎಂಬುದಾಗಿ ಹೇಳುತ್ತಾನೆ. ಲತಾಳಿಗೆ ಕುಸುಮಾಳ ಗಂಡನನ್ನು ಕಂಡು ಆಶ್ಚರ್ಯವಾಗುತ್ತದೆ. ನಂತರ ವೆಂಕಮ್ಮಳ ಹತ್ತಿರ ಅವರು ಯಾವಾಗ ಬಂದಿದ್ದು ಮತ್ತು ಅವರ ಸಂಬಂಧಿ ಎಲ್ಲಿದ್ದಾರೆ ಎಂಬುದಾಗಿ ಕೇಳುತ್ತಾಳೆ. ಅದಕ್ಕೆ ವೆಂಕಮ್ಮ ಕುಸುಮಾಳ ಗಂಡ ಎಲ್ಲೂ ಹೋಗಿರಲಿಲ್ಲ. ಇಲ್ಲೇ ಇದ್ದರು ಮತ್ತೆ ಯಾರೂ ಸಂಬಂಧಿಕರು ಬರಲಿಲ್ಲ ಎಂಬುದಾಗಿ ಹೇಳಿದಾಗ ಲತಾಳಿಗೆ ಅಚ್ಚರಿಯಾಗುತ್ತದೆ. ಇಲ್ಲಿ ಕುಸುಮಾಳಿಗೆ ಗಂಡನ ಮೇಲಿನ ಆತೃಪ್ತಿಯೇ ಮಾನಸಿಕ ಅಸ್ವಸ್ಥತೆಗೆ ಒಳಗಾಗುವಂತೆ ಮಾಡುತ್ತದೆ. ಹಾಗಾಗಿ ಗಂಡ ಮನೆಯಲ್ಲೇ ಇದ್ದರೂ ಕೂಡ ಆತ ಅಪರಿಚಿತನಂತೆ ಕಾಣುವುದು. ಆವಾಗ ಆವಾಗ ಕಾಣೆಯಾಗಿದ್ದಾನೆ ಎಂತ ಅನಿಸುವುದು ಇದೆಲ್ಲಾ ಆಕೆ ಮಾನಸಿಕ ಒತ್ತಡಕ್ಕೆ ಒಳಗಾಗಿರುವುದರ ಕಾರಣಕ್ಕೆ.

ಹೀಗೆ ವಿಭಕ್ತ ಕುಟುಂಬದಲ್ಲಿ ಕೂಡ ಹೆಣ್ಣಿಗೆ ಸ್ವತಂತ್ರವಾಗಿ ಬದುಕುವುದಕ್ಕೆ ಸಾಧ್ಯವಾಗುವುದಿಲ್ಲ.

**೩.೩ ಅವಿಭಕ್ತ ಕುಟುಂಬ:**

ಅವಿಭಕ್ತ ಕುಟುಂಬದಲ್ಲಿ ಮನೆಯ ಹಿರಿಯ ವ್ಯಕ್ತಿ ಯಜಮಾನನಾಗಿರುತ್ತಾನೆ. ಮನೆಯ ಮತ್ತೆಲ್ಲಾ ಸದಸ್ಯರು ಆತ ಹೇಳಿದಂತೆ ಕೇಳುತ್ತಿರುತ್ತಾರೆ. ವೈದೇಹಿಯವರ ಕತೆಗಳಲ್ಲಿ 'ಅಕ್ಕು' ಮತ್ತು 'ಗುಲಾಬಿ ಟಾಕೀಸು ಮತ್ತು ಸಣ್ಣ ಅಲೆಗಳು' ಕತೆಯನ್ನ ನೋಡಬಹುದು. 'ಅಕ್ಕು' ಕತೆಯಲ್ಲಿ ಅವಿಭಕ್ತ ಕುಟುಂಬ ವ್ಯವಸ್ಥೆಯ ಬಗ್ಗೆ ನಿರೂಪಕಿ ಹೇಳುತ್ತಾರೆ. ಹಿರಿಯ ವ್ಯಕ್ತಿ ದೊಡ್ಡಜ್ಜಯ್ಯ ಇದ್ದಾರೆ. ಅವರೇ ಮನೆಯ ಯಜಮಾನ. "ಅಜ್ಜಯ್ಯನ ಮನೆಯಲ್ಲಿ ಯಾರೂ ಸ್ವತಂತ್ರರಲ್ಲ. ಸ್ವಲ್ಪ ಸ್ವರ ಇರುವುದಾದರೆ ವಾಸುಚಿಕ್ಕಪ್ಪಯ್ಯನಿಗೆ. ಮಾತಾಡಲು ಒಂಚೂರು ಧೈರ್ಯ ಮಾಡುವುದಾದರೆ ಅವನ ಹೆಂಡತಿ ಭಾನು ಚಿಕ್ಕಿ. ಯಾರಿಗೂ ಹೆದರದವರೆಂದರೆ ದೊಡ್ಡಜ್ಜನ ತಂಗಿ 'ದೊಡ್ಡತ್ತೆ'. ಎಲ್ಲರಿಗೂ ದೊಡ್ಡತ್ತೆ. ಯಾವ ನಿರ್ಬಂಧವೂ ಇಲ್ಲದಿರುವವಳೆಂದರೆ ಅಕ್ಕು, ಪೊಟ್ಟು. ಹೇಗೆ ಬೇಕಾದರೂ ತಿರುಗಿಕೊಂಡಿರಲಿ, ಹೊತ್ತು ಕಳೆಯಬೇಕಲ್ಲ ಎಂಬ ಮಾಫಿ ಪಡೆದವಳು. ಪೊಟ್ಟು ಎಂದರೆ ಮುಂಚಿನಿಂದಲೂ ಪೊಟ್ಟೆಂತ ಅಲ್ಲ. ಮನೆಯಲ್ಲಿ ಉಳಿದವರೆಲ್ಲ ಮಜ್ಜಿಗೆ ಕಡೆಯಲಿಕ್ಕೆ, ಅಡಿಗೆಗೆ, ಉಪ್ಪು ಹುಳಿ ಹಾಕಲಿಕ್ಕೆ, ನೀರೆತ್ತಲಿಕ್ಕೆ, ಹೊಸ ಸೀರೆ ಚಿನ್ನ ತೊಟ್ಟು ಮದುವೆ ಉಪನಯನ ಇತ್ಯಾದಿಗಳಿಗೆ ಹೋಗಿ ಬರಲಿಕ್ಕೆ. ಗಂಡಸರು ವ್ಯವಹಾರ ನೋಡಿ ಅಜ್ಜಯ್ಯನಿಗೆ ವರದಿ ಒಪ್ಪಿಸಲಿಕ್ಕೆ. ಆ ಮನೆಯ ಕಂಬಗಳಂತೆ. ತಲೆಯ ಮೇಲೆ ಭಾರವಿದ್ದರೂ ತುಟಿ ಎರಡು ಮಾಡರು"[೧೩]. ಇಲ್ಲೆಲ್ಲಾ ಮನೆಯಲ್ಲಿ ಯಾರು ಹೆಚ್ಚಾಗಿ ಮಾತನಾಡುವುದಕ್ಕೆ ಹೋಗುವುದಿಲ್ಲ. ಅಂದರೆ ಹೆಂಗಸರಿಗೆ ಮಾತನಾಡುವ ಧೈರ್ಯವಿಲ್ಲ. ಆದರೆ ಅಕ್ಕು ಮಾತ್ರ ಯಾರಿಗೂ ಹೆದರದೆ ತನ್ನ ಪಾಡಿಗೆ ತಾನಿರುತ್ತಿದ್ದಳು. ಅವಳು ಸ್ವತಂತ್ರಳಾಗಿ ಓಡಾಡುತ್ತಿದ್ದಳು. ಯಾವುದೇ ತೊಂದರೆ ಇಲ್ಲದೆ, ಯಾವುದೇ ಕಟ್ಟುಪಾಡುಗಳಿಲ್ಲದೆ ತಿರುಗಾಡಿಕೊಂಡಿರುತ್ತಿದ್ದಳು. ಅದಕ್ಕೆ ಕಾರಣ ಆಕೆಯ ಮನಸ್ಥಿತಿ. ಆಕೆ ಮತಿಭ್ರಮಣೆಯಾದ ಹೆಣ್ಣು. ಹಾಗಾಗಿ ಆಕೆ ಏನೂ ಮಾಡಿದರೂ ಎಲ್ಲಿ ಹೋದರೂ ಯಾರು ವಿಚಾರಿಸುತ್ತಿರಲಿಲ್ಲ. ಆಕೆಯ ಗೊಡವೆಗೆ ಹೋಗುತ್ತಿರಲಿಲ್ಲ. ಇಲ್ಲಿ 'ಅಕ್ಕು'ವಿನ ಆ ಸ್ಥಿತಿಗೆ ಕಾರಣ ಒಬ್ಬ ಪುರುಷ. ಆಕೆ ಹುಟ್ಟಿನಿಂದ ಹುಚ್ಚಿಯಲ್ಲ. ಆಕೆಯನ್ನ ಮದುವೆಯಾದವ ಸರಿಯಾಗಿ ಬಾಳಿಸಕ್ಕಾಗದೆ ಈಕೆಯನ್ನ ಬಿಟ್ಟು ಸನ್ಯಾಸಿಯ ಹಿಂದೆ ಓಡಿಹೋಗುತ್ತಾನೆ. ಅಂದಿನಿಂದ ತನ್ನ ಎಲ್ಲಾ ಬಯಕೆಗಳನ್ನ ಮನಸ್ಸಲ್ಲೇ ಬಚ್ಚಿಟ್ಟುಕೊಂಡ ಅಕ್ಕು ಹುಚ್ಚಿಯಾಗುತ್ತಾಳೆ. ಅಂದಿನಿಂದ ಆಕೆ ಯಾವುದೇ ನಿರ್ಬಂಧವಿಲ್ಲದೆ ಓಡಾಡಿಕೊಂಡಿರುತ್ತಾಳೆ. ಅಕ್ಕು ಯಾರ ಮನೆಯಲ್ಲಿ ಏನೇ ಕಾರ್ಯಕ್ರಮ, ಊಟ ಇದ್ದರೆ ಬಿಡುವವಳಲ್ಲ. "ಬಿಡದೆ ಹೋಗುವ ಊಟಗಳೆಂದರೆ

ಬಸುರಿ–ಬಯಕೆಯ ಊಟ, ಮತ್ತು ನಾಮಕರಣದ್ದು"[೧೪]. ನಾಮಕರಣಕ್ಕೆ ಹೋದರೆ ತೊಟ್ಟಿಲು ಪಕ್ಕ ಕೂತರೆ ಅಲ್ಲಿಂದ ಬಿಟ್ಟು ಏಳುವವಳಲ್ಲ. ಅವಳಿಗೂ ಮಗುವನ್ನು ಆಡಿಸುವ ಆಸೆ. ಅವಳು ಯಾರ ಮಾತನ್ನು ಕೇಳುವವಳಲ್ಲ. ಅವಳು ಕೂತ ಕಡೆಯಿಂದ ಆಕೆಯನ್ನ ಎಬ್ಬಿಸುವ ಧೈರ್ಯ ಅಲ್ಲಿ ಯಾರಿಗೂ ಇರಲಿಲ್ಲ. ಸಿರಿಯತ್ತೆಯ ಮದುವೆ ದಿನ ಆಕೆಯ ಹೂವನ್ನೆಲ್ಲ ಕಿತ್ತು ಹಾಕಿ "ಸಾಕಷ್ಟ್ ಚಂದ! ನಿನ್ ಚಂದ ಕಂಡ್ ಮದ್ವೆ ಆಪಂವ ಖಂಡಿತ ಬಾಳ್ಸುದಿಲ್ಲೆ. ಗೋಡೆ ಮೇಲೆ ಬರ್ದಿಟ್ಕೋ"[೧೫]– ಅಂತ ಹೇಳುತ್ತಾಳೆ. ಇಲ್ಲಿ ಅಕ್ಕುವಿಗೆ ಗಂಡಸರ ಮೇಲೆ ನಂಬಿಕೆ ಇಲ್ಲ. ಆಕೆಯ ಗಂಡ ಅಕ್ಕುವಿಗೆ ಮೋಸ ಮಾಡಿ ಓಡಿಹೋದ ಮೇಲೆ ಯಾವ ಗಂಡಸನ್ನು ಆಕೆ ನಂಬುವುದಿಲ್ಲ. ಅವಳ ಈ ಮಾನಸಿಕ ಅಸ್ವಸ್ಥತೆಯನ್ನ ಕಂಡು ಎಲ್ಲಾ ಜನರು ಆಕೆಗೆ ಗೇಲಿ ಮಾಡುವುದನ್ನು ಬಿಟ್ಟರೆ ಆಕೆಯ ಮನಸ್ಥಿತಿಯನ್ನು ಅರ್ಥ ಮಾಡಿಕೊಂಡು ಆಕೆಯ ಸ್ಥಿತಿಯನ್ನು ಸರಿಪಡಿಸುವ ಪ್ರಯತ್ನ ಆ ಕುಟುಂಬದಲ್ಲಿ ಯಾರೂ ಮಾಡುವುದಿಲ್ಲ.

ಸಿರಿಯತ್ತೆ ಮದುವೆಯಾಗಿ ಹೋದ ದಿನ ಅಕ್ಕು ತನ್ನ ಗಂಡನನ್ನು ತಂದುಕೊಡಿ ಎಂದು ಹಟ ಹಿಡಿದಾಗ ಮನೆಮಂದಿ ಎಲ್ಲಾ ಆಕೆಗೆ ತಮಾಷೆ ಮಾಡುತ್ತಾರೆ. ಭಾನುಚಿಕ್ಕಿ ಒಂದು ಹೆಣ್ಣಾಗಿ ಆಕೆಯೂ ಅಕ್ಕುವಿನ ಮನ ಸ್ಥಿತಿಯನ್ನ ತಿಳಿಯದೇ ಹೋಗುತ್ತಾಳೆ. ತಮಾಷೆ ಮಾಡುತ್ತಾಳೆ ಹೀಗೆ ತುಂಬಾ ಜನರಿರುವ ಕುಟುಂಬವಾದರೂ ಎಲ್ಲರೂ ಅವರ ಪಾಡಿಗೆ ಅವರಿರುತ್ತಿದ್ದರು. ಅಕ್ಕುವನ್ನು ಸರಿ ಪಡಿಸುವ ಚಿಂತೆ ಅಲ್ಲಿ ಯಾರಿಗೂ ಇರಲಿಲ್ಲ. ಅಕ್ಕುವಿನ ಗಂಡ ಕೆಲವು ವರುಷಗಳ ಬಳಿಕ ಬಂದಾಗ ಆತನೊಂದಿಗೆ ಹೋಗುವಂತೆ ದೊಡ್ಡಜ್ಜಯ್ಯ ಮತ್ತು ದೊಡ್ಡತ್ತೆ ಒತ್ತಾಯಿಸುತ್ತಾರೆ. ಇಲ್ಲಿ ಆಕೆ ಹೋಗಲ್ಲ ಎಂದು ಹಟ ಹಿಡಿದಾಗ ವಾಸುಚಿಕ್ಕಪ್ಪಯ್ಯ ಆಕೆಗೆ ಹೊಡೆಯುತ್ತಾನೆ. ಇಲ್ಲಿ ಇಷ್ಟೊಂದು ಪುರುಷ ದೌರ್ಜನ್ಯ, ಕ್ರೌರ್ಯ ನಡೆಯುತ್ತಿದ್ದರೂ ಅಲ್ಲಿ ಯಾರೂ ವಿಚಾರಿಸುವವರಿಲ್ಲ ಅದೂ ಬಿಟ್ಟು ಮನೆಮಂದಿಯೆಲ್ಲ ಆತನಿಗೆ ಮತ್ತೂ ಹೊಡೆಯಲು ಹುರಿದುಂಬಿಸುತ್ತಾರೆ.

ಈಗ ಇಡೀ ಕತೆಯಲ್ಲಿ ಒಂದು ಅವಿಭಕ್ತ ಕುಟುಂಬದಲ್ಲಿ ಸದಸ್ಯರೆಲ್ಲರೂ ಅವರ ಪಾಡಿಗೆ ಅವರಿದ್ದರೂ ಕೂಡ ಅಕ್ಕುವಿನಂತವಳ ಬದುಕನ್ನು ಸರಿಪಡಿಸುವ ಚಿಂತೆಯನ್ನ ಯಾರೂ ಮಾಡುವುದಿಲ್ಲ. ಗಂಡಸರ ಮಾತನ್ನ ವಿರೋಧಿಸುವ, ಅವರೊಂದಿಗೆ ಸರಿಯಾಗಿ ಕೂತು ಚರ್ಚೆ ಮಾಡುವ ಧೈರ್ಯ ಆ ಮನೆಮಂದಿಯರಿಗಿಲ್ಲ. ಮನೆಯಲ್ಲಿ ಏನೇ ಸಂಗತಿ ನಡೆದರೂ ಅದನ್ನು ಮನೆಯ ಗಂಡಸರೇ ಬಗೆ ಹರಿಸಬೇಕಾಗಿತ್ತು. ಹೆಣ್ಣು ಮಕ್ಕಳು ಆ ವಿಷಯಕ್ಕೆ ತಲೆ ಹಾಕುವಂತಿರಲಿಲ್ಲ. ಹಾಗೇ ನಿರೂಪಕಿ ಹೇಳುವಂತೆ "ಒಮ್ಮೆ ನಾವೆಲ್ಲ ಮನೆಯಾಟವಾಡುತ್ತಿದ್ದಾಗ ಝುಣ ಝುಣ ಶಬ್ದ ಕೇಳಿಸಿತು. ನಮ್ಮ ಗಂಟಲು ನೀರು ಆರಿತು.

ಏಳಲೊಲ್ಲದ ಕಾಲನ್ನೆಳೆದುಕೊಂಡು ಹೋಗಿ ಸುದ್ದಿ ಮುಟ್ಟಿಸಿದಾಗ ವಾಸುಚಿಕ್ಕಪ್ಪಯ್ಯ ಮತ್ತು ಅಂತಣ್ಣ ಓಡಿ ಬಂದರು. ಅವರ ಹಿಂದೆ ನಾವೂ ಬಂದಾಗ 'ಹೆಣ್ ಮಕ್ಳಿಗೆಲ್ಲ ಎಂಥದದು ಧೈರ್ಯ! ಹೋತ್ರಿಯಾ ಇಲ್ಯ ಆಚೆಗೆ!' ಎಂದು ದನ ಎಬ್ಬಿದಂತೆ ಎಬ್ಬಿದರು"[೧೬]. ಹೀಗೆ ಹೆಣ್ಣುಮಕ್ಕಳಿಗೆ ಯಾವುದೇ ವಿಷಯದಲ್ಲಿ ತಲೆಹಾಕುವ ಸ್ವತಂತ್ರವಿರಲಿಲ್ಲ.

ಹೀಗೆ ಒಂದು ಅವಿಭಕ್ತ ಕುಟುಂಬದಲ್ಲಿ ಮನೆಯ ಯಜಮಾನ ಹೇಳಿದ್ದೇ ನಡೆಯಬೇಕು. ಆತ ಪುರುಷನೇ ಆಗಿರುತ್ತಾನೆ. ಗಂಡಸರು ಹೇಳಿದಂತೆ ಹೆಂಗಸರು ಕೇಳುತ್ತಾರೆ. ಹೆಂಗಸರಿಗೆ ಮಾತಾಡುವ ಧೈರ್ಯವಿಲ್ಲ. ಅಕ್ಕು ಮಾತ್ರ ಎಲ್ಲರೊಂದಿಗೆ ಧೈರ್ಯದಿಂದ ಮಾತನಾಡುತ್ತಿದ್ದಳು ಎಂದರೆ ಆಕೆಯ ಮಾನಸಿಕ ಸ್ಥಿತಿ. ಆಕೆ ಎಲ್ಲರಂತೆ ಸರಿಯಿರುತ್ತಿದ್ದರೆ ಆಕೆಯೂ ಇತರರಂತೆ ಇರುತ್ತಿದ್ದಳು. ಅವಿಭಕ್ತ ಕುಟುಂಬದಲ್ಲಿ ಹಳ್ಳಿಯ ಹೆಣ್ಣಿನ ಪಾತ್ರ ಚಿತ್ರಣ, ಅವರು ಹಳ್ಳಿಯ ಜೀವನದಿಂದ ಆಧುನಿಕತೆಗೆ ತೆರೆದುಕೊಳ್ಳುವ ಚಿತ್ರಣವನ್ನ 'ಗುಲಾಬಿ ಟಾಕೀಸು ಮತ್ತು ಸಣ್ಣ ಅಲೆಗಳು' ಕತೆಯಲ್ಲಿ, ಅವಿಭಕ್ತ ಕುಟುಂಬದ ಜೀವನವನ್ನು ಕಾಣಬಹುದು. ಗಂಡಸರು ಸಂಜೆಯ ಹೊತ್ತಿನಲ್ಲಿ ವಾಕಿಂಗ್ ಹೋಗಿ ಬಯಲಲ್ಲಿ ಕುಳಿತುಕೊಳ್ಳುತ್ತಿದ್ದರು. ಆದರೆ ಹೆಂಗಸರು ಬಯಲಿಗೆ ಹೋಗುವಂತಿರಲಿಲ್ಲ. ಹೆಂಗಸರು ತಾವಾಗಿ ಹೊರಗಡೆ ರಸ್ತೆಗೆ ಇಳಿದಿರಲಿಲ್ಲ. ಮನೆಯಲ್ಲಿಯೇ ಇರುತ್ತಿದ್ದರು.

"ಸಂಜೆ ಹೊತ್ತಿನಲ್ಲಿ ಮಕ್ಕಳನ್ನು ಆಟಕ್ಕೆ ಕಳಿಸಿ ತಲೆ ಬಾಚಿಕೊಂಡು, ಹಣೆಗಿಟ್ಟುಕೊಂಡು, ಸಂಜೆ ಮಲ್ಲಿಗೆ ದಂಡೆಯನ್ನೋ, ಸುರುಳಿ ಹೂವಿನ ದಂಡೆಯನ್ನೋ ಮುಡಿಗೇರಿಸಿಕೊಂಡು ಸ್ವಲ್ಪ ಸುಧಾರಿಸಿಕೊಂಡಿರುತ್ತಿದ್ದರು. ಅಥವಾ ನಾಳೆಯ ಕಡುಬಿಗೆ ಕೊಟ್ಟೆ ಸೆಡುತ್ತಲೋ, ಅಕ್ಕಿ-ಉದ್ದು ಅರೆಯುತ್ತಲೋ, ಹೂ ಕಟ್ಟುತ್ತಲೋ ಇರುತ್ತಿದ್ದರು. ಸೂರ್ಯ ಕಂತಿದೊಡನೆ ದೇವರಿಗೆ ದೀಪ ಹಚ್ಚಿ ತಾಳ ತಟ್ಟುತ್ತಾ ಭಜನೆ ಮಾಡುತ್ತಿದ್ದರು. ಅವರು ಹೆಚ್ಚಾಗಿ ಒಂದೋ ಬಾಣಂತಿ, ಇಲ್ಲವೋ ಬಸುರಿ, ಇಲ್ಲವೇ ಮುಟ್ಟು ಅಥವಾ ಎಲ್ಲವನ್ನೂ ಮುಗಿಸಿ ಕುಳಿತವರಾಗಿರುತ್ತಿದ್ದರು. ಒಟ್ಟಿಗೆ ಬಾಳುತ್ತಿದ್ದ ಆ ಮನೆಗಳಲ್ಲಿ ಮನೆಯ ಒಂದಲ್ಲ ಒಂದು ಮೂಲೆಯಲ್ಲಿ ಒಂದಲ್ಲ ಒಂದು ಜನ ಕಣ್ಣೊರಸಿಕೊಳ್ಳುತ್ತ ನಿಲ್ಲುವುದೂ ಸಾಮಾನ್ಯವಾಗಿತ್ತು"[೧೭].

ಅವಿಭಕ್ತ ಕುಟುಂಬ ಜೀವನದಲ್ಲಿ ಹೆಣ್ಣಿನ ಚಿತ್ರಣವನ್ನು ನಿರೂಪಕಿ ತಮ್ಮ ಅನುಭವದ ನೆಲೆಯಲ್ಲಿ ಕಟ್ಟಿಕೊಟ್ಟಿದ್ದಾರೆ. ಅಂದರೆ ಸಂಪ್ರದಾಯಸ್ಥ ಮನೆತನದ ಹೆಂಗಸರು ತಮ್ಮ ಬದುಕನ್ನು ಮನೆಯೊಳಗಡೆಯೇ

ಕಳೆಯುತ್ತಿದ್ದರು ಅವರ ಕಷ್ಟ-ಸುಖಗಳು ಏನೇ ಇದ್ದರೂ ಅದು ಮನೆಯವರೊಂದಿಗೆ ಮಾತ್ರ. ಸಂಜೆಯ ಹೊತ್ತಲ್ಲಿ ಎಲ್ಲರೂ ಕೂತು ಭಜನೆ ಮಾಡುವ ಪದ್ಧತಿ ಇತ್ತು.

ಆ ಹಳ್ಳಿಯಲ್ಲಿ ಎಲ್ಲೋ ಹಿಂದೆ ಒಂದು ಸರ್ಕಸ್ಸು ಬಂದಿತ್ತು ಎಂದು ಹೇಳುತ್ತಿದ್ದರು. ಹಾಗೇ ನಾಟಕ ಕಂಪೆನಿಯೂ ಬಂದಿತ್ತು ಎಂದು ಮಾತನಾಡುತ್ತಾರೆ. ಆದರೆ ಅದನ್ನ ಎಷ್ಟು ಹೆಂಗಸರು ನೋಡಿದ್ದಾರೆ ಎಂಬುದು ಗೊತ್ತಿಲ್ಲ. ಯಾಕೆಂದರೆ ಹೆಂಗಸರು ಮನೆಯಿಂದ ಹೊರಗಡೆ ಹೋಗುವಂತಿರಲಿಲ್ಲ. ಹೋದರೂ ಗಂಡಸರೊಂದಿಗೆ ಮಾತ್ರ. ಹಾಗೇ ಇದ್ದಾಗ ಆರು ತಿಂಗಳಿಗೊಮ್ಮೆ ಒಂದು ಟೆಂಟ್ ಬರುತ್ತಿತ್ತು. ಅದನ್ನು ಎಷ್ಟು ಹೆಂಗಸರು ನೋಡಿದ್ದಾರೆ ಎಂಬುದು ಗೊತ್ತಿಲ್ಲ ಹಾಗೇ ನಿರೂಪಕಿ ಸಂಪ್ರದಾಯಸ್ಥ ಹೆಣ್ಣಿನ ಕೌಟುಂಬಿಕ ಬದುಕನ್ನು ತೆರೆದಿಟ್ಟಂತೆ ಕೆಳಜಾತಿ ಹೆಂಗಸರ ಕೌಟುಂಬಿಕ ಬದುಕಿಗೆ ಅಷ್ಟು ಪ್ರಾಶಸ್ತ್ಯಕೊಟ್ಟಂತೆ ಕಾಣುವುದಿಲ್ಲ. ಸಂಪ್ರದಾಯಸ್ಥ ಹೆಂಗಸರು ಗಂಡಸರನ್ನೇ ಅವಲಂಬಿಸಿರುತ್ತಿದ್ದರು. ಗಂಡಸರಿಲ್ಲದೇ ರಸ್ತೆಗಿಳಿಯುವುದು ಅವರಿಂದ ಸಾಧ್ಯವಾಗಿರಲಿಲ್ಲ. ಗಂಡಸರು ಅವರನ್ನು ಕರೆದುಕೊಂಡು ಹೋಗಿ ಟಿಕೇಟ್ ತೆಗೆಸಿಕೊಟ್ಟು ಅವರನ್ನು ಕೂರಿಸಿ ಸಿನಿಮಾ ಮುಗಿದ ಮೇಲೆ ಕರೆದುಕೊಂಡು ಬರುತ್ತಿದ್ದರು.

ಆದರೆ "ಮುಂದಿನ ಸೀಟಿನಲ್ಲಿ ಚಾಪೆಯ ಮೇಲೆ ಕುಳಿತುಕೊಳ್ಳುವ ಕೊರಗ-ಕೂಸಾಳು ಹೆಂಗಸರೆಲ್ಲ ಸ್ವತಃ ಯಾರ ಎಗ್ಗಿಲ್ಲದೆ ಬಂದು ಕೂತು ಸಿನೆಮಾ ನೋಡುತ್ತ ಬಿಸಾತಿಲ್ಲದೆ ನಕ್ಕು – ಅತ್ತು ಎದ್ದು ಹೋಗುತ್ತಿರಲಿಲ್ಲವೆ? ಎಂಬ ಪ್ರಶ್ನೆ ಕೇಳಿದರೆ 'ಅವೇ ಲಂಗು ಲಗಾಮು ಇಲ್ಲದವು!' ಎಂಬೊಂದು ಸಸಾರದ ಮಾತು ಬಂದೀತು"[೧೮].

ಹೀಗೆ ಹೆಂಗಸರು ಆಧುನಿಕತೆಗೆ ತೆರೆದುಕೊಳ್ಳುತ್ತಿದ್ದಾರೆ ಎಂದು ತಿಳಿದರೂ ಕೂಡ ಹೆಂಗಸರಿಗೆ ಗಂಡಸರ ಸಹಾಯವಿಲ್ಲದೆ ಬಂದು ಹೋಗುವುದು ಅವರಿಂದ ಸಾಧ್ಯವಾಗಿರಲಿಲ್ಲ.

ಹೀಗೆ ಇದ್ದಾಗ ಆ ಹಳ್ಳಿಗೆ ಆಧುನಿಕತೆಯ ಪ್ರವೇಶವಾಗುತ್ತದೆ. ಗುಲಾಬಿಯ ದತ್ತು ಮಗ ಬೊಂಬಾಯಿಗೆ ಹೋದವನು ಆ ಹಳ್ಳಿಗೆ ಬಂದು ಒಂದು ಸಿನೆಮಾ ಟಾಕೀಸನ್ನು ತೆರೆಯುತ್ತಾನೆ. ಅಲ್ಲಿ ಸೂಲಗಿತ್ತಿ ಲಿಲ್ಲೀಬಾಯಿ ಗೇಟ್‌ಕೀಪರ್ ಆಗಿ ಕೆಲಸಕ್ಕೆ ಸೇರಿಕೊಳ್ಳುತ್ತಾಳೆ. ಇಲ್ಲಿ ಲಿಲ್ಲೀಬಾಯಿಯ ಬದುಕು ಕೂಡಾ ಬದಲಾಗುತ್ತದೆ. ಹೊಸ ಹೊಸ ಸಿನೆಮಾ ಬರತೊಡಗಿದಂತೆ ಹಳ್ಳಿಯ ಜೀವನ ಕ್ರಮ ಬದಲಾಗುತ್ತದೆ.

"ದಿನೇ ದಿನೇ ಬಳೆ ಅಂಗಡಿಯಲ್ಲಿ ನಾನಾ ತರಹದ ಪೌಡರು ಡಬ್ಬಿಗಳು ಮತ್ತಿತರ ಪ್ರಸಾಧನಗಳು ಹೊಸದಾಗಿ ಬರಲು ಪ್ರಾರಂಭಿಸಿ ಅಂಗಡಿಯವನ ಬಿಸಿನೆಸ್ ಕುದುರಿದ್ದು, ದರ್ಜಿ ಹೆಂಗಸು ಹೊಸ ಫ್ಯಾಶನ್ನಿಗೆ ಸರಿಯಾಗಿ ಹೊಲಿಯುವುದೇ ಒಂದು ಸವಾಲಾಗಿ ಹಾಗೂ ಆಕೆ ಎಂತೋ ಎಣಿಸಿ ಹೊಲಿದದ್ದೇ ಫ್ಯಾಶನ್ ಆಗಿ ಆರೋಪಿಸಲ್ಪಟ್ಟು – ಉಡುಗೆಯ ಲೋಕದಲ್ಲಿ ಅಲ್ಲೋಲ ಕಲ್ಲೋಲವಾಗಿ ಅದು ಹೆಂಗಸರ ನಡೆ ನುಡಿಗಳಿಗೂ ದಾಟಿಕೊಂಡದ್ದು, ಮದುವೆ ಮಂಚಲುಗಳಲ್ಲಿ ಹೆಂಗಸರ ಅಲಂಕಾರ ಮತ್ತು ಮದುಮಗಳ ಅಲಂಕಾರಗಳನ್ನು ಸಿನೆಮಾ ಗಾಳಿ ಸವರಿದ್ದು, ರಂಗರಾಯರ ಮನೆ ಅಡುಗೆ ಹೆಂಗಸಿಗೆ ಧೂಪದ ಮರದ ಭೂತ ಮೈಮೇಲೆ ಬರಲು ಸುರುವಾಗಿ ಸಿನೆಮಾ ಕಾಸನ್ನು ಸುಳಿದು ಎದುರಿಟ್ಟೊಡನೆ ಇಳಿಯುತ್ತಿದ್ದದ್ದು, ಸಿನೆಮಾ ನೋಡಲಿಕ್ಕಾಗಿ ಹೆಂಗಸರು ಮುಟ್ಟಾಗುವುದನ್ನು ಕಾಯುತ್ತಾ ಮಡಿ ಮೈಲಿಗೆಯ ಪರಿಧಿಯಲ್ಲಿ ಒಂದು ಛಳಕನ್ನೇ ಹುಟ್ಟಿಸಿದ್ದು, ಅವರೆಲ್ಲರೂ ತಂತಮ್ಮ ಸ್ವರ ಮರೆತು ಹಿನ್ನೆಲೆ ಗಾಯಕಿಯರೇ ತಾವು ಎಂಬಂತೆ ಎಲ್ಲೆಂದರಲ್ಲಿ ತಾಲೀಮು ನಡೆಸಲಾರಂಭಿಸಿದ್ದು ಸ್ಕೂಲ್‌ಡೇಗಾಗಿ ಚಲನ ಚಿತ್ರಗೀತೆಗಳ ಸ್ಪರ್ಧೆಯೂ ಸೇರಿಕೊಂಡದ್ದು, ಭಜನೆಗೂ ಸಿನೆಮಾ ಹಾಡುಗಳು, ಧಾಟಿಗಳು ಮಿಸಕ್ಕನೆ ದಾಟಿಕೊಂಡದ್ದು, ಪ್ರೀತಿಸುವಾಗಲೂ ಸಿನೆಮಾ ಶಬ್ದಗಳು ಸಹಾಯ ಮಾಡುತ್ತ ಶಬ್ದವಿಲ್ಲದ್ದೆಲ್ಲ ಏಕಾಏಕಿಯಾಗಿ ಬೂಸು ಎಂದು ಕಾಣತೊಡಗಿದ್ದು, ಎಲ್ಲಕ್ಕಿಂತ ಹೆಚ್ಚು, ಮಗುವನ್ನು ತೂಗುತ್ತಾ ಜೋಗುಳವನ್ನು ಅಲ್ಲಲ್ಲೇ ಕಟ್ಟಿ ಕಟ್ಟಿ ಹಾಡುತ್ತಿದ್ದವರು, ಈಗ ಅವನ್ನೆಲ್ಲ ಮರೆತು ಸಿನೆಮಾದ ಜೋಗುಳವನ್ನು ಗುನುಗತೊಡಗಿದ್ದು"[೯೯] – ಹೀಗೆಲ್ಲ ಹೆಂಗಸರ ಜೀವನದಲ್ಲಿ ಬದಲಾವಣೆಯಾಗಿದ್ದನ್ನ ಕಾಣಬಹುದು.

ಹೀಗೆ ಕ್ರಮೇಣ ಹೆಂಗಸರು ತಾವೇ ದುಡ್ಡು ಮಾಡುವುದನ್ನು ಕಲಿತರು. ಗಂಡಸರೊಂದಿಗೆ ಜಾಸ್ತಿ ದುಡ್ಡು ಕೇಳಿ ಅದನ್ನು ಮರುದಿನಕ್ಕೆ ಕೂಡಿಡುವ ಬುದ್ಧಿಯನ್ನು ಕಲಿತರು. ಹೆಂಗಸರೇ ಮನೆಯಿಂದ ರಸ್ತೆಗೆ ಇಳಿಯುವುದನ್ನು ಅಭ್ಯಾಸ ಮಾಡಿಕೊಂಡರು. ಹೀಗೆ ಆಧುನಿಕತೆಯ ಪ್ರವೇಶದಿಂದ ಕೌಟುಂಬಿಕ ಬದುಕಿನಲ್ಲಿ ಹೆಂಗಸರ ಜೀವನ ಬದಲಾಗಿದ್ದನ್ನ ನೋಡಬಹುದಾಗಿದೆ. ಹೆಂಗಸರೂ ಎಲ್ಲಾ ರೀತಿಯಲ್ಲೂ ಬದಲಾದರು.

ಒಟ್ಟಿನಲ್ಲಿ ವೈದೇಹಿಯವರ ಕತೆಗಳಲ್ಲಿ ಕೌಟುಂಬಿಕ ಬದುಕಿನ ಚಿತ್ರಣವನ್ನು ವಿಭಕ್ತ ಮತ್ತು ಅವಿಭಕ್ತ ಕುಟುಂಬವಾಗಿ ವಿಂಗಡಿಸಿ ಅದರಲ್ಲಿ ಸ್ತ್ರೀ ನಿರ್ವಹಿಸುವ ಪಾತ್ರ ಹಾಗೂ ಪುರುಷರು ನಿರ್ವಹಿಸುವ ಪಾತ್ರ ಚಿತ್ರಣವನ್ನು ಕಾಣಬಹುದು. ಅವಿಭಕ್ತ ಕುಟುಂಬದಲ್ಲಿ ಹೆಣ್ಣಿಗೆ ಕೊಟ್ಟಿರುವ ಸ್ಥಾನಮಾನಗಳನ್ನು ಗುರುತಿಸುವ ಪ್ರಯತ್ನ ಈ ಅಧ್ಯಾಯದಲ್ಲಿ ನಡೆದಿದೆ. ಹಾಗೆಯೇ ಅವಿಭಕ್ತ ಕುಟುಂಬದ ಸಮಗ್ರತೆ ಆಧುನೀಕರಣಕ್ಕೆ ಸಿಕ್ಕಿ ಛಿದ್ರಗೊಳ್ಳುವುದನ್ನು ಸಿನೇಮಾ ಟಾಕೀಸಿನ ಪರಿಕಲ್ಪನೆಯಿಂದ ಕತೆಗಾರ್ತಿ ಸೂಚ್ಯವಾಗಿ ವಿಶ್ಲೇಷಿಸಿದ್ದಾರೆ.

ಸಿನೇಮಾ ಜಗತ್ತು ಆಯಾಚಿತವಾಗಿ ಎಲ್ಲರ ಮೇಲೂ, ಕಡು ಸಂಪ್ರದಾಯವಾದಿಗಳ ಮೇಲೂ ಪ್ರಭಾವ ಬೀರುತ್ತದೆ ಎನ್ನುವುದನ್ನು ಸೂಕ್ಷ್ಮವಾಗಿ ನಿರೂಪಿಸಲಾಗಿದೆ.

# ಸಂದರ್ಭಸೂಚಿ


೧. ಅಲೆಗಳಲ್ಲಿ ಅಂತರಂಗ : ವೈದೇಹಿ : ಪುಟ : ೧೦೫ : ೨೦೦೫

೨. ಅಲೆಗಳಲ್ಲಿ ಅಂತರಂಗ : ವೈದೇಹಿ : ಪುಟ : ೧೦೫-೧೦೬ : ೨೦೦೫

೩. ವೈದೇಹಿಯವರ ಕಥೆಗಳು : ಟಿ.ಪಿ.ಅಶೋಕ : ಪುಟ : ೩೧ : ೧೯೯೫

೪. ಅಲೆಗಳಲ್ಲಿ ಅಂತರಂಗ : ವೈದೇಹಿ : ಪುಟ : ೧೬೪ : ೨೦೦೫

೫. ಅಲೆಗಳಲ್ಲಿ ಅಂತರಂಗ : ವೈದೇಹಿ : ಪುಟ : ೩೩೬ : ೨೦೦೫

೬. ಅಲೆಗಳಲ್ಲಿ ಅಂತರಂಗ : ವೈದೇಹಿ : ಪುಟ : ೩೬೬-೩೬೭ : ೨೦೦೫

೭. ಅಲೆಗಳಲ್ಲಿ ಅಂತರಂಗ : ವೈದೇಹಿ : ಪುಟ : ೩೬೯ : ೨೦೦೫

೮. ವೈದೇಹಿಯವರ ಸಾಹಿತ್ಯ: ಒಂದು ಅಧ್ಯಯನ : ಡಾ.ಸುರೇಖಾ ಕೆ. : ಪುಟ : ೩೪ : ೨೦೦೬

೯. ಅಲೆಗಳಲ್ಲಿ ಅಂತರಂಗ : ವೈದೇಹಿ : ಪುಟ : ೧೮೧ : ೨೦೦೫

೧೦. ಅಲೆಗಳಲ್ಲಿ ಅಂತರಂಗ : ವೈದೇಹಿ : ಪುಟ : ೧೮೩ : ೨೦೦೫

೧೧. ಅಲೆಗಳಲ್ಲಿ ಅಂತರಂಗ : ವೈದೇಹಿ : ಪುಟ : ೧೮೪ : ೨೦೦೫

೧೨ ಅಲೆಗಳಲ್ಲಿ ಅಂತರಂಗ : ವೈದೇಹಿ : ಪುಟ : ೫೬೦ : ೨೦೦೫

೧೩ ಅಲೆಗಳಲ್ಲಿ ಅಂತರಂಗ : ವೈದೇಹಿ : ಪುಟ : ೧೫೧ : ೨೦೦೫

೧೪ ಅಲೆಗಳಲ್ಲಿ ಅಂತರಂಗ : ವೈದೇಹಿ : ಪುಟ : ೧೫೨ : ೨೦೦೫

೧೫ ಅಲೆಗಳಲ್ಲಿ ಅಂತರಂಗ : ವೈದೇಹಿ : ಪುಟ : ೧೫೩ : ೨೦೦೫

೧೬ ಅಲೆಗಳಲ್ಲಿ ಅಂತರಂಗ : ವೈದೇಹಿ : ಪುಟ : ೧೫೫-೧೫೬ : ೨೦೦೫

೧೭ ಅಲೆಗಳಲ್ಲಿ ಅಂತರಂಗ : ವೈದೇಹಿ : ಪುಟ : ೩೧೮ : ೨೦೦೫

೧೮ ಅಲೆಗಳಲ್ಲಿ ಅಂತರಂಗ : ವೈದೇಹಿ : ಪುಟ : ೩೧೯ : ೨೦೦೫

೧೯ ಅಲೆಗಳಲ್ಲಿ ಅಂತರಂಗ : ವೈದೇಹಿ : ಪುಟ : ೩೨೨ : ೨೦೦೫

# ೪: ವೈದೇಹಿಯವರ ಕತೆಗಳಲ್ಲಿ ಕಾಣಿಸಿಕೊಳ್ಳುವ ಸ್ತ್ರೀ ಆಕೃತಿಗಳು.

೪.೧ : ಪ್ರಸ್ತಾವನೆ

೪.೨ : ಸಾಂಪ್ರದಾಯಿಕ ಸ್ತ್ರೀ ಆಕೃತಿಗಳು

೪.೩ : ನಡೆದಾಟದ ಸ್ತ್ರೀ ಆಕೃತಿಗಳು

೪.೪.: ಶೋಷಿತ ಮಹಿಳೆಯರ ಚಿತ್ರಣ

# ೪: ವೈದೇಹಿಯವರ ಕತೆಗಳಲ್ಲಿ ಕಾಣಿಸಿಕೊಳ್ಳುವ ಸ್ತ್ರೀ ಆಕೃತಿಗಳು.

## ೪.೧. ಪ್ರಸ್ತಾವನೆ:

ಸ್ತ್ರೀ ಆಕೃತಿ ರೂಪುಗೊಳ್ಳುವುದು ಅವಳಿಗೂ ಒಂದು ಮನಸ್ಸಿದೆ. ಅವಳ ಬದುಕನ್ನು ನಿರ್ವಹಿಸುವಷ್ಟು ಆತ್ಮವಿಶ್ವಾಸ ಅವಳಿಗಿದೆ. ನಾವು ಅದನ್ನು ಒದಗಿಸಿಕೊಡಬೇಕು ಎಂಬ ಅಭಿಪ್ರಾಯ ಮುಖ್ಯ. ಆಕೃತಿ ಎಂದರೆ ಒಂದು ರೂಪ. ಈ ಆಕೃತಿಗಳು ಸಮಾಜದ ಒಳಗೇ ಇರತಕ್ಕಂತಹ ಆಕೃತಿಗಳು. ಕತೆಗಾರ್ತಿ ಇಂತಹ ಆಕೃತಿಗಳನ್ನು ನೀಡುವಾಗ ಯಾವುದೇ ಪಕ್ಷವನ್ನು ವಹಿಸದೆ ಮುಕ್ತ ಮನಸ್ಸಿನಿಂದ ವ್ಯವಹರಿಸುವುದು ಅತೀ ಮುಖ್ಯವಾಗುತ್ತದೆ. ಮತ್ತು ಈ ಆಕೃತಿಗಳನ್ನು ಸಮಕಾಲೀನಗೊಳಿಸುವ ಇರಾದೆ ಕೂಡ ಲೇಖಕಿಗೆ ಇರಬೇಕಾಗುತ್ತದೆ.

ವೈದೇಹಿ ಕತೆಗಳಲ್ಲಿ ಸಂಪ್ರದಾಯಸ್ಥರಿಂದ ಹಿಡಿದು ಆಧುನಿಕದವರೆಗೆ, ಅವಿವಾಹಿತೆಯರಿಂದ ಹಿಡಿದು ವಿಧವೆಯವರೆಗೆ, ಗೃಹಿಣಿಯಿಂದ ಹಿಡಿದು ವೇಶ್ಯೆಯವರೆಗೆ ಹರಡಿಕೊಂಡಿರುವ ಸ್ತ್ರೀಯರನ್ನು ಕಾಣಬಹುದು. ಇಲ್ಲಿಯ ಸ್ತ್ರೀ ಬೇರೆ ಬೇರೆ ಜಾತಿ, ವಯಸ್ಸು ಅಂತಸ್ತುಗಳಲ್ಲಿ ಕಾಣಿಸಿಕೊಳ್ಳುತ್ತಾಳೆ. ಇಲ್ಲಿ ಓದಿದವರು, ಓದನ್ನೇ ತಿಳಿಯದವರು, ಹುಚ್ಚರು, ಕಳ್ಳರು ಹೀಗೆ ಸ್ತ್ರೀ ವಿವಿಧ ಆಕೃತಿಗಳಲ್ಲಿ ಕಾಣಿಸಿಕೊಳ್ಳುತ್ತಾಳೆ.

ಈ ಕತೆಗಳಲ್ಲಿ ಕಾಣಿಸಿಕೊಳ್ಳುವ ಸ್ತ್ರೀ ಆಕೃತಿಗಳನ್ನು ಅಧ್ಯಯನದ ದೃಷ್ಟಿಯಿಂದ.

ಅ) ಸಾಂಪ್ರದಾಯಿಕ ಸ್ತ್ರೀ ಆಕೃತಿಗಳು

ಆ) ನಡೆದಾಟಿದ ಸ್ತ್ರೀ ಆಕೃತಿಗಳು ಹಾಗೂ

ಇ) ಶೋಷಿತ ಮಹಿಳೆಯರ ಚಿತ್ರಣ ಹೀಗೆ ಮೂರು ಭಾಗಗಳಾಗಿ ವಿಂಗಡಿಸಿಕೊಂಡಿದ್ದೇನೆ.

## ೪.೨. ಸಾಂಪ್ರದಾಯಿಕ ಸ್ತ್ರೀ ಆಕೃತಿಗಳು

'ಅಕ್ಕು' ಕತೆಯಲ್ಲಿ ಪಿತೃ ಪ್ರಧಾನ ವ್ಯವಸ್ಥೆಯ ದೌರ್ಜನ್ಯವನ್ನು ಪ್ರತಿಭಟಿಸಿ ನಿಲ್ಲುವಂತಹ ಹೆಣ್ಣಾಗಿ ಅಕ್ಕುವಿನ ಚಿತ್ರಣ ಕಂಡುಬರುತ್ತದೆ. ಹಾಗೇ ಒಂದು ಮಾನಸಿಕ ಅಸ್ವಸ್ಥ ಹೆಣ್ಣಿನ ಮನಸ್ಥಿತಿಯನ್ನ

ಅರ್ಥಮಾಡಿಕೊಳ್ಳಲಾಗದ ಮನೆಯ ಹೆಂಗಸರು ಅವರಿಂದಲೇ ಅವಮಾನಕ್ಕೆ ಒಳಗಾಗುವಂತದ್ದು. ಇಲ್ಲಿ ಕತೆ ಪ್ರಾರಂಭವಾಗುವುದೇ "ಅಕ್ಕುವಿಗೆ ದೊಡ್ಡ ಕುಂಕುಮವಿದೆ ಆದರೆ ಗಂಡನಿಲ್ಲ. ಕತ್ತಿನಲ್ಲಿ ಕರಿಮಣಿಯಿದೆ. ಕರಿಮಣಿಯನ್ನು ನಾಗಂದಿಗೆಯ ಮೂಲೆಯಲ್ಲಿಟ್ಟು ಸವಾರಿ ಹೊರಡುವ ರಿವಾಜೂ ಅಕ್ಕುವಿಗುಂಟು. 'ಅಕ್ಕೊ, ನಿನ್ ಗಂಡ ಎಲ್ಲಿ?' ಎಂದು ಕೇಳಿದರೆ ಕೇಳಿದವರ ಗ್ರಹಚಾರವನ್ನೇ ಆಕೆ ಮುಗಿಸಿಕೊಡುವುದಿದೆ. ಎಲ್ಲ ಸಲವು ಅಲ್ಲ. ಒಮ್ಮೊಮ್ಮೆ ಗುಮ್ಮಕ್ಕಿಯಂತೆ ಕುಳಿತರೂ ಕುಳಿತಳೇ. ಕೆಲವೊಮ್ಮೆ ಏನೇ ಹೇಗೆ ಕೆಣಕಿದರೂ ಕಣ್ಣು ಮೂಗು ಬಾಯಿ ಕೊಡಿಯಲ್ಲೆಲ್ಲ ಡೊಂಕು ಡೊಂಕಾಗಿ ನಗೆ ಬಿಕ್ಕುತ್ತ ತಲೆ ಕೊಡಕಿ ಬಿಡುವ ಗುಣವೂ ಅಕ್ಕುವಿಗೆ ಇದೆ"[6] ಇಲ್ಲಿ ಅಕ್ಕು ಮೊದಲಿಂದಲೂ ಹುಚ್ಚಿಯಲ್ಲ. ಮದುವೆಯಾದ ನಂತರ ಗಂಡ ಆಕೆಯನ್ನು ಸುಖವಾಗಿ ನೋಡಿಕೊಳ್ಳದೆ ಯಾವುದೋ ಸನ್ಯಾಸಿಯ ಹಿಂದೆ ಓಡಿಹೋಗುತ್ತಾನೆ. ಆ ಮೇಲಿನಿಂದ ಆಕೆ ಶೋಷಣೆಗೆ ಒಳಗಾಗಿ ತನ್ನ ಸ್ವಾತಂತ್ರ್ಯವನ್ನು ಕಳೆದುಕೊಳ್ಳುವಂತಹ ಹೆಣ್ಣಾಗಿ ಕಂಡು ಬರುತ್ತಾಳೆ.

ಗಂಡ ಓಡಿ ಹೋದಾಗಿನಿಂದ ಅಕ್ಕು ಮಾನಸಿಕ ರೋಗಿಯಾಗುತ್ತಾಳೆ. ಅಂದಿನಿಂದ ಆಕೆಗೆ ಬಸುರಿಯಾಗುವ ಆಸೆ, "ಅಕ್ಕು ಬಿಡದೆ ಹೋಗುವ ಊಟಗಳೆಂದರೆ ಬಸುರಿ-ಬಯಕೆಯ ಊಟ, ಮತ್ತು ನಾಮಕರಣದ್ದು ಹಾಗೆ ಹೋದವಳು ಮಲ್ಲಿಗೆ, ಅಬ್ಬಲಿಗೆ, ಸೇವಂತಿಗೆ, ಇರುವಂತಿಗೆ ಇತ್ಯಾದಿ ಏಳು ಹೂಗಳ ಜಲ್ಲಿ ಬಿಡಿಸಿಕೊಂಡು ಭಾರದ ಮೇಲೆ ಭಾರ ಹೇರಿದವರಂತೆ ಕುಳಿತ ಬಸುರಿಯ ಬಳಿಯಿಂದ ಆಚೀಚೆ ಹಂದಾಡಲಿಕ್ಕಿಲ್ಲ. ಗುರುತಿಲ್ಲದವರೋ, ಹುಡುಗಿಯ ಗಂಡನ ಮನೆಯವರೋ, ಮರುಳಿಯಂತೆ ಕುಳಿತ ಅಕ್ಕುವನ್ನು ಕಂಡು 'ಇದ್ಯಾರೆ ಈ ಬಿಕ್ರಮಂಡೆ ದ್ಯೇವಮ್ಮ! ಅಲ್ಲಿಂದ ಯೇಳ್ಸಿಕಾಂಬ' ಎಂದರೂ. ಮನೆಯವರು ಬಂದು ಹೆದಹೆದರುತ್ತಾ ಅಕ್ಕು ಬಾ, ಈಚೆ ಕೂಕೊ'- ಎಂದರೂ, ಅಕ್ಕುವಿನ ಕಿವಿ ಅದಕ್ಕೆಲ್ಲ ಪೂರ್ತಿ ಕೆಪ್ಪೇ. ನಾಮಕರಣಕ್ಕೆ ಹೋದರೂ ಅಷ್ಟೆ. ಮಗುವಿನ ತೊಟ್ಟಿಲು ಹಗ್ಗ ಹಿಡಿದು ಬೀಸುವುದನ್ನು ಆಕೆ ಬಿಡುವುದು ವಾಪಾಸು ಮನೆಗೆ ಬರುವಾಗಲೇ ಬಂದ ನೆಂಟರೆಲ್ಲ ಹೋದ ಮೇಲೆ ಎರಡು ಲಾಲಿ ಹಾಡಿದರೂ ಹಾಡಿದಳೇ"[7]. ಆಕೆಯ ಮನಸ್ಸನ್ನ ಅರ್ಥಮಾಡಿಕೊಳ್ಳದ ಊರ ಜನರು ತಮಾಷೆಯಾಗಿ ತೆಗೆದುಕೊಂಡು ಅವಳನ್ನ ಅವಮಾನಿಸಿ ನಗುತ್ತಿದ್ದರು. ಹೀಗೆ ಅಕ್ಕು ತನ್ನ ಆಸೆ, ಬಯಕೆಗಳನ್ನ ಆ ರೀತಿಯಲ್ಲಿ ಬೇರೆಯವರ ಬಸುರಿ-ಬಯಕೆಯ ಊಟ, ಮತ್ತು ಮಗುವಿನ ನಾಮಕರಣಕ್ಕೆ ಹೋಗುವ ಮೂಲಕ ತೀರಿಸಿಕೊಳ್ಳುತ್ತಿದ್ದಳು. ಆದರಿಂದ ಸಂತೋಷಪಟ್ಟುಕೊಳ್ಳುತ್ತಿದ್ದಳು. ಹೀಗೆ ಇರುವಾಗ ಆಕೆಯ ತಂಗಿ ಸಿರಿಯತ್ತೆಯ ಮದುವೆ ದಿನ ಬರುತ್ತದೆ. ಸಿರಿಯತ್ತೆ ಹೇಳುವಂತೆ ಸಿರಿಯತ್ತೆ ಚೆನ್ನಾಗಿ ಅಲಂಕಾರ ಮಾಡಿಕೊಂಡು ನಿಂತಿದನ್ನ ಕಂಡು ಸಿರಿಯತ್ತೆಯ ಬಳಿಗೆ ಬಂದು "ನೆತ್ತೀವರೆಗೆ ಮುಡ್ದ್ ಹೂವನ್ನೇ ಕಣ್ಮುಚ್ಚಿ ತೆರ್ಯುದ್ರೊಳ್ಗೆ ಹರ್ದ್ ತೈಗ್ದ್ 'ಸಾಕಷ್ಟ್ ಚಂದ! ನಿನ್ ಚಂದ್ ಕಂಡ್ ಮದ್ವೆ ಆಪಂವ ಖಂಡಿತ ಬಾಳ್ಸುದಿಲ್ಲೆ. ಗೋಡೆಮೇಲೆ ಬರ್ದಿಟ್ಕೋ'- ಅಂದ್ಲ್"[8] .

ಇದು ಅಕ್ಕುವಿನ ಮನಸ್ಥಿತಿಯನ್ನ ಹೇಳುತ್ತದೆ. ಆಕೆಯ ಮನಸ್ಸಿನ ದು:ಖ, ದುಗುಡವನ್ನ ಅವಳು ಆ ರೀತಿಯಲ್ಲಿ ವ್ಯಕ್ತಪಡಿಸುತ್ತಾಳೆ.

ಸಿರಿಯತ್ತೆ ಮದುವೆಯಾಗಿ ಹೋದ ಮೇಲೆ ಅಕ್ಕು "ನನ್ ಗಂಡ ಎಲ್ಲಿ ಸತ್ತ? ಈ ಕ್ಷಣ ತಂದು ಕೊಡಿ!"[೪]- ಎಂಬುದಾಗಿ ಗಲಾಟೆ ಮಾಡುತ್ತಾಳೆ. ಆಗ "ವಾಸು ಚಿಕ್ಕಪ್ಪಯ್ಯ ಹಲ್ಲಿನ ಚಡಿಗೆ ಕಡ್ಡಿ ಹಾಕುತ್ತಾ ನಿಂತಿದ್ದವ 'ಅಗ ಕಾಣಲ್ಲಿ, ಓ ತಟ್ಟಿ ಚಡಿಯೊಳ್ಗೆ!' ಎಂದು ಇತ್ತಿನ ಧಾತಿಲ್ಲದೆ ಮಲಗಿಗೊರೆಯುತ್ತಿದ್ದ ಅಡುಗೆಯ ಬಾಬುಭಟ್ಟನನ್ನು ತೋರಿಸಿದ. ಭಾನುಚಿಕ್ಕಿ ಒಂದು ಗೊಂಬೆ ತಂದು ಅವಳ ಎದುರು ಬಿಸಾಡಿ 'ನಿನ್ ಗಂಡ! ಯಾವಾಗ ಬಂದಿದ್ನೋ ಏನೋ ಒಬ್ರೂ ಕಂಡವ್ರಿಲ್ಲೆ. ಅಕ್ಕೂ ಅಕ್ಕೂ ಅಂತೆಳಿ ಸೋರ್ಲೊಳ್ಗೆ ಅರ್ಚ್‌ಕಂತಿದ್ದ. ಕರ್ಕಂಡ್ ಬಂದೆ"[೫]- ಎಂದಳು. ಇಲ್ಲಿ ಭಾನುಚಿಕ್ಕಿ ಒಂದು ಹೆಣ್ಣಾಗಿ ಆಕೆಯ ಮನಸ್ಥಿತಿಯನ್ನೆ ಅರ್ಥ ಮಾಡಿಕೊಳ್ಳದೇ ಆಕೆಗೆ ಅವಮಾನಿಸುವುದನ್ನು ಕಾಣಬಹುದು. ಮತ್ತೆ ಅದೇ ಸಮಯಕ್ಕೆ ಯಕ್ಷಗಾನದಲ್ಲಿ ಸ್ತ್ರೀ ಪಾತ್ರ ಮಾಡುತ್ತಿದ್ದ ತಮ್ಮಣ್ಣಯ್ಯಾ "ಪ್ರೀಯೇ ನಿನ್ನ ಗಂಡನೆಂಬುವ ನಾನು ಒಂದಿದ್ದೇನೇ. ನನ್ನಿಂದೇನಾಗಬೇಕು"[೬]- ಎಂದು ನಾಟಕೀಯವಾಗಿ ಮುಗುಳು ನಗುತ್ತಾ ಕೇಳುತ್ತಾನೆ. ಅಲ್ಲಿವರೆಗೆ ಸುಮ್ಮನೆ ಗಲಾಟೆ ಮಾಡುತ್ತಿದ್ದ ಅಕ್ಕು ತಕ್ಷಣ ಬಂದು ತಮ್ಮಣ್ಣಯ್ಯನನ್ನು ಕಚ್ಚುವ ಮೂಲಕ ತನ್ನ ಪ್ರತಿಭಟನೆಯನ್ನ ತೋರಿಸುತ್ತಾಳೆ. ಹೀಗೆ ಅಲ್ಲಿದ್ದವರೆಲ್ಲರೂ ಒಂದಲ್ಲ ಒಂದು ವಿಧದಲ್ಲಿ ಆಕೆಗೆ ಅವಮಾನ ಮಾಡಿ ನಗುತ್ತಾ ಆಕೆಯ ದು:ಖವನ್ನ ಇನ್ನಷ್ಟು ಹೆಚ್ಚು ಮಾಡಿ ತಾವು ಸಂತೋಷ ಪಟ್ಟುಕೊಳ್ಳುತ್ತಿದ್ದರು. ಆ ಸಮಯದಲ್ಲಿ ಆಕೆಯನ್ನ ಸಮಾಧಾನಿಸುವ ಮನಸ್ಸು ಅಲ್ಲಿ ಯಾರಿಗೂ ಇರಲಿಲ್ಲ.

ಅಕ್ಕುವಿನ ಗಂಡ ಸನ್ಯಾಸಿ ಹಿಂದೆ ಹೋದಂದಿನಿಂದ ಬಸುರಿ ತರ ನಾಟಕ ಮಾಡುತ್ತಿದ್ದಳು. ಹೊಟ್ಟೆ ನೋವು ಎಂದು ಆ ಕಡೆ ಈ ಕಡೆ ಬೊಬ್ಬಿಡುತ್ತಾ ಮನೆ ತುಂಬಾ ಓಡಾಡುತ್ತಿದ್ದಳು. ಹಾಗೇ ಗಲಾಟೆ ಮಾಡಿದಾಗ ಆಕೆಗೆ "ನಿನ್ ಹೊಟ್ಟೆ ನೋವು ಬಿಡಿಸ್ತೆ'- ಎಂತ ದೊಡ್ಡಜ್ಜಯ್ಯ ರಪರಪೆಂತ ಹಿಡಿಕಟ್ಟು ಹುಡಿ ಮಾಡಿದಾಗ 'ಅಪ್ಪಯ್ಯ' ನನ್ ಮಗು ಸಾಯತ್, ನಿಮ್ಗೆ ಪಾಪ, ತಟ್ಟತ್ ಕಾಣ್'- ಎನ್ನುತ್ತ ಬಗ್ಗಿಕೊಂಡೆ ಹೊಟ್ಟೆ ತಪ್ಪಿಸಿಕೊಳ್ಳುತ್ತಿದ್ದಳು"[೭] ಹೀಗೆ ಇನ್ನೊಂದು ಸಲ ಆಕೆ "ಕಳಚಿ ಇಟ್ಟಿದ ಸರಪಳಿ ಹಿಡಿದು ತೊಟ್ಟಿಲು ತೂಗುವಂತೆ ಅಲ್ಲಾಡಿಸುತ್ತಿದ್ದಳು. ಶ್, ಮಾತಾಡ್ಬೇಡಿ ಮಗು ಈಗಷ್ಟೇ ಮೊಲೆಯುಂಡ್ ಮನ್ಕಂಡಿತ್- ಎಂದಳು"[೮] ಅದನ್ನ ಕೇಳಿ ವಾಸು ಚಿಕ್ಕಪ್ಪಯ್ಯ ಮತ್ತು ದೊಡ್ಡತ್ತೆ ನಗೆಯಾಡಿ ದೊಡ್ಡತ್ತೆ "ಹಾಲು ಮಸ್ತಿತ್ತ್ ಕೇಣ ವಾಸು"-ಎಂಬುದಾಗಿ ಅವಮಾನ ಮಾಡುತ್ತಿದ್ದರು. ಇಲ್ಲಿ ಆಕೆ ಗಂಡಸರಿಂದ ಮಾತ್ರವಲ್ಲದೇ ಹೆಣ್ಣಿನಿಂದ ಕೂಡ ಮಾನಸಿಕ ಶೋಷಣೆಗೆ ಒಳಗಾಗುತ್ತಿದ್ದಳು. ಹೀಗೇ ಇರಲು ಒಂದು ದಿನ ಆಕೆಯ ಓಡಿಹೋದ ಗಂಡ

ಸಂಕಪ್ಪ ವಾಪಸ್ಸು ಬರುತ್ತಾನೆ. ಆದರೆ ಆತನೊಂದಿಗೆ ಪುನ: ಹೋಗಲು ಅಕ್ಕುವಿಗೆ ಮನಸ್ಸಿಲ್ಲ. ಆದರೂ ಅಕ್ಕುವಿನ ಮನಸ್ಸನ್ನ ಅರ್ಥಮಾಡಿಕೊಳ್ಳದೇ ದೊಡ್ಡಜ್ಯಯ್ಯ ಮತ್ತು ದೊಡ್ಡತ್ತೆ ತುಂಬಾ ಒತ್ತಾಯಿಸುತ್ತಾರೆ. ವಾಸುಚಿಕ್ಕಪ್ಪಯ್ಯ ಕೋಣೆಯಲ್ಲಿ ಹಾಕಿ ಚೆನ್ನಾಗಿ ಹೊಡೆಯುತ್ತಾರೆ. ಈ ಇಡೀ ಕತೆಯಲ್ಲಿ ಅಕ್ಕು ಹುಚ್ಚಿಯಾದ್ದರಿಂದ ಮಾತ್ರ ಆ ಮನೆಯವರ, ಗಂಡಸರ ಮಾತನ್ನು ತಿರಸ್ಕರಿಸಿ, ತನ್ನಿಚ್ಚೆಯಂತೆ ಬದುಕುತ್ತಾಳೆ. ಇಲ್ಲಿ ಎಲ್ಲೂ ಒಂದು ಹೆಣ್ಣಿನ ಪ್ರತಿಭಟನೆ ಕಂಡುಬರುವುದಿಲ್ಲ. ಆದರೆ ಅಕ್ಕು ಅನೇಕ ರೀತಿಯಲ್ಲಿ ತನ್ನ ಪ್ರತಿಭಟನೆಯನ್ನ ವ್ಯಕ್ತಪಡಿಸುತ್ತಾಳೆ. ಆಕೆಗೆ ಅವಮಾನಿಸಿದಾಗ ತಮ್ಮಣ್ಣಯ್ಯನಿಗೆ ಕಚ್ಚುವ ಮೂಲಕ, ಆತನ ಹೆಂಡತಿ ಬೇರೊಬ್ಬನೊಂದಿಗೆ ಮಲಗಿದ್ದಾಳೆ ಎಂಬ ಮಾತಿನಿಂದ ಅಥವಾ ವಾಸುಚಿಕ್ಕಪ್ಪಯ್ಯನಿಗೆ ತಮ್ಮಣ್ಣಯ್ಯನ ಮನೆ ಜಗಲಿಯಲ್ಲಿ ಯಾಕಿದ್ದ ಕೇಳಿ ಎಂದು ಅಪ್ಪಯ್ಯನಿಗೆ ಹೇಳುವ ಮೂಲಕ ತನ್ನ ಪ್ರತಿಭಟನೆ ತೋರಿಸುತ್ತಾಳೆ. ಕೊನೆಗೂ ಅವರ ಮಾತನ್ನ ಧಿಕ್ಕರಿಸಿ ನಿಲ್ಲುತ್ತಾಳೆ. ಒಟ್ಟಿನಲ್ಲಿ ಅಕ್ಕು 'ಹುಚ್ಚಿ' ಎಂಬ ಕಾರಣದಿಂದ ಎಲ್ಲರಿಂದಲೂ ಶೋಷಣೆಗೆ ಒಳಗಾಗುತ್ತಾಳೆ. ಅದು ಮನೆಯ ಗಂಡಸರಿಂದ ಇರಬಹುದು ಹೆಂಗಸರಿಂದಲೂ ನೋವನ್ನು ಅನುಭವಿಸುತ್ತಾಳೆ. ಇಲ್ಲಿ ಆಕೆಯನ್ನ ಮಾನಸಿಕವಾಗಿಯೂ, ದೈಹಿಕವಾಗಿಯೂ ಶೋಷಣೆಗೆ ಒಳಪಡಿಸುತ್ತಾರೆ. ಆದರೂ ಮನೆಯಲ್ಲಿ ಯಾರಿಗೂ ಆಕೆಯ ಮೇಲೆ ಕನಿಕರ ಇಲ್ಲ. ಆಕೆಯ ಮನಸ್ಸಿನ ಭಾವನೆಯನ್ನ ಅರ್ಥಮಾಡಿಕೊಳ್ಳುವ ಇನ್ನೊಂದು ಮನಸ್ಸು, ನೋವಿಗೆ ಸ್ಪಂದಿಸುವ ಹೃದಯಗಳು ಇಲ್ಲ. ಇಲ್ಲಿ ದೊಡ್ಡತ್ತೆ, ಭಾನುಚಿಕ್ಕಿ ಹೆಣ್ಣಾಗಿದ್ದರೂ ಕೂಡ ಇನ್ನೊಂದು ಹೆಣ್ಣಿನ ಮನಸ್ಥಿತಿಯನ್ನ ಅರ್ಥಮಾಡಿಕೊಳ್ಳುವುದಿಲ್ಲ. ಗಂಡಸರು ಕೂಡ ಹೆಂಗಸರ ಮನಸನ್ನು ಅರ್ಥಮಾಡಿಕೊಳ್ಳುವುದಿಲ್ಲ. ಆಕೆಯನ್ನ ಸಮಾಧಾನ ಮಾಡುವ ಬದಲಿಗೆ ಹೆಚ್ಚು ಅವಮಾನ ಮಾಡುತ್ತಾರೆ. ಒಟ್ಟಿನಲ್ಲಿ ಅಕ್ಕು ತನ್ನ ಹುಚ್ಚಿನಾವಸ್ಥೆಯ ಕಾರಣದಿಂದಾಗಿ ಪ್ರತಿಭಟಿಸಿ ನಿಲ್ಲುತ್ತಾಳೆ. ಆಕೆಯದು ಸಹಜ ಸ್ಥಿತಿಯಾಗಿದ್ದರೆ ಪ್ರತಿಭಟಿಸುತ್ತಿದ್ದಳೇ ಎಂಬ ಪ್ರಶ್ನೆ ಕಾಡುತ್ತದೆ.

ಇಲ್ಲಿ ಹುಚ್ಚು ಬುದ್ಧಿಗೆ ಅಂಟಿದ ಪೊರೆಯಾಗಲೇ ಪ್ರಜ್ಞೆಯ ಎಚ್ಚರದ ನೆಲೆಯಲ್ಲಿದೆ. ಈ ನೆಲೆಯಲ್ಲಿ ಇಲ್ಲಿನ ಹುಚ್ಚು ಹುಚ್ಚಲ್ಲ. ಸಹಜ ಎಚ್ಚರವೂ ಅಲ್ಲ. ಜಡಸ್ಥಿತಿಗೆ ಸಹಜ ಸ್ಥಿತಿಯನ್ನು ಮೀರಿದ ನೆಲೆಯ ಪ್ರತಿಕ್ರಿಯ.

'ಪುಟ್ಟಮ್ಮತ್ತೆ ಮತ್ತು ಮೊಮ್ಮಗಳು' ಕತೆಯಲ್ಲಿ ಬರುವ ಪುಟ್ಟಮ್ಮತ್ತೆ ಪುರುಷ ದೌರ್ಜನ್ಯವನ್ನು ಚಿಕ್ಕಂದಿನಿಂದಲೇ ಅನುಭವಿಸಿದವಳು. ಆದರೆ ಕಮಲಾವತಿಗೆ ಇದರ ಅನುಭವವಿಲ್ಲ. ಆಕೆಯನ್ನ ಪುಟ್ಟಮ್ಮತ್ತೆ ಸುಖವಾಗಿ ಬೆಳೆಸಿದ್ದಾಳೆ. ಹಾಗಾಗಿ ಪುಟ್ಟಮ್ಮತ್ತೆಯ ಕಷ್ಟಗಳು ಕಮಲಾವತಿಗೆ ತಿಳಿಯುವುದಿಲ್ಲ. ಆದರೆ ಸ್ವಲ್ಪ

ದೊಡ್ಡವಳಾದ ಮೇಲೆ ಕಮಲಾವತಿಗೂ ಜವಾಬ್ದಾರಿ ಬಂದ ಮೇಲೆ ಆಕೆ ಆ ಪುರುಷ ದೌರ್ಜನ್ಯವನ್ನು ಹಾಗೇನೇ ಬಡವರ ಮೇಲಿನ ಶೋಷಣೆಯನ್ನ ಹತ್ತಿಕ್ಕುವ ಪ್ರಯತ್ನವನ್ನ ಮಾಡುತ್ತಾಳೆ. ಶ್ರೀಮಂತರ ದಬ್ಬಾಳಿಕೆಯನ್ನ ಮನಗಂಡು ಅಜ್ಜಿಯನ್ನ ತಾನೇ ದುಡಿದು ಸಾಕಬೇಕೆಂಬ ಹಟದಿಂದ ಕೆಲಸಕ್ಕೆ ಕೂಡ ಸೇರುತ್ತಾಳೆ. ಆದರೆ ಕೊನೆಗೆ ಈ ಬಡವ–ಶ್ರೀಮಂತ, ಗಂಡು–ಹೆಣ್ಣು ಎಂಬ ಭೇಧಭಾವವಿರುವ ಈ ಪುರುಷ ಸಮಾಜದಲ್ಲಿ ಅದು ಸಾಧ್ಯವಾಗದೇ ಹೋಗುತ್ತದೆ. ಆದರೂ ಕೊನೆಯವರೆಗೂ ಕಮಲಾವತಿ ಕ್ರೌರ್ಯವನ್ನು ಎದುರಿಸಿ ನಿಲ್ಲುವ ಧೈರ್ಯವಂತೆ ಹೆಣ್ಣಾಗಿ ಕಂಡು ಬರುತ್ತಾಳೆ.

ಇಲ್ಲಿ ಪುರುಷರಿಂದ ಶೋಷಣೆ ನಡೆಯುತ್ತಲೇ ಇತ್ತು. ಪುಟ್ಟಮ್ಮತ್ತೆಯ ತಾಯಿಯೇ ಕಷ್ಟಪಟ್ಟು "ಮನೆ ಹಿತ್ತಲಲ್ಲಿ ಬೆಂಡೆ, ಬದನೆ, ಹೀರೇಬೆಳೆಸಿ, ತೊಂಡೆ ಚಪ್ಪರ ಸ್ವತ: ಹಾಕಿ ಅವರಿವರ ಗದ್ದೆಯಲ್ಲಿ ಬೆನ್ನು ಬಗ್ಗಿಸಿ ದುಡಿದು ದಿನ ತೆಗೆದಳಂತೆ. ಕೇರಿ ಮನೆಗಳಲ್ಲಿ ಅರೆದು ಕೊಟ್ಟು, ಅವರಿವರು ಉಟ್ಟ ಬಟ್ಟೆ ಸೀರೆಯನ್ನೇ ಉಟ್ಟು ರವಿಕೆ ಇದ್ದರೆ ಹಾಕಿ, ಇಲ್ಲವೆ ಸೆರಗನ್ನೇ ಮೈ ತುಂಬ ಹೊದ್ದು ದಿನ ಕಳೆದವಳು. ಇಂದಿನ ದಿನ ಮರ್ಯಾದೆಯಲ್ಲಿ ಕಳೆಯಿತೇ, ಬಚಾವಾದೆ ಎಂದು ಹೆಂಗಸು ಅಪ್ಪಂಥ ಗಂಡನೆಂಬವ ಒಬ್ಬ ಇಲ್ಲದ ಮೇಲೆ, ಸ್ವಂತವಾಗಿ ಬೇಕಷ್ಟು ದುಡಿಯುವ ಸಾಮರ್ಥ್ಯವೂ ಇಲ್ಲದ ಮೇಲೆ ವಿದ್ಯೆ ನೈವೇದ್ಯವೆಂದ ಮೇಲೆ ಪ್ರಪಂಚದಲ್ಲಿ ಹೆಣ್ಣು ಹೆಂಗಸಿನ ಅವಸ್ಥೆ ಅಂದಿನಿಂದ ಇಂದಿಗೂ ಇಷ್ಟೇ"[೧೦]. ಹಾಗೆ ಕಷ್ಟಪಟ್ಟು ತಾನೇ ದುಡಿದು ಗಂಡನನ್ನು ಸಾಕುತ್ತಿದ್ದ ಪುಟ್ಟಮತ್ತೆಯ ತಾಯಿಯೊಂದಿಗೆ ತಂದೆ ಏನೋ ಚಿಕ್ಕ ವಿಷಯಕ್ಕೆ ಜಗಳ ತೆಗೆದು ಅದು ಜೋರಾಗಿ ನಂತರ ತಂದೆ ಸಿಟ್ಟಿನಿಂದ ತಾಯಿಯನ್ನು ಬಾವಿಗೆ ಹಾಕಿ ಕೊಲ್ಲುತ್ತಾನೆ. ಆಗ ಪುಟ್ಟಮ್ಮತ್ತೆ ಆರು ತಿಂಗಳ ಮಗು. ಅಂದಿನಿಂದ ಪುಟ್ಟಮ್ಮತ್ತೆಯನ್ನ ಅಜ್ಜಿಯೇ ಸಾಕುತ್ತಾರೆ. ಪುಟ್ಟಮ್ಮತ್ತೆ ದೊಡ್ಡವಳಾಗುತ್ತಿದ್ದಂತೆ ಅಜ್ಜಿಯೂ ಸತ್ತುಹೋಗುತ್ತಾರೆ. ಆಗ ಅಜ್ಜಿಯ ನೆನಪಲ್ಲಿ ಅವಳ ಸೀರೆಯನ್ನು ಹೊದ್ದು ಮಲಗಿಕೊಂಡಿದ್ದಾಗ ಯಾರೋ ಬಂದು ಹೊದೆದ ವಸ್ತ್ರವನ್ನು ಎಳೆದು, ಕೈ ಹಾಕಿದಾಗ ಬೊಬ್ಬೆ ಹೊಡೆದು ದೊಡ್ಡ ಸೇಪ್ಟಿಪಿನ್‌ನಲ್ಲಿ ಚುಚ್ಚಿ ಓಡಿಸುತ್ತಾರೆ. ಆ ಬೊಬ್ಬೆ ಕೇಳಿ ಮನೆಯಲ್ಲಿದ್ದವರೆಲ್ಲರೂ ಬಂದು ಕೇಳಿ ಆತನಿಗೆ ಬೈದರೇ ಹೊರತು, ಅವನನ್ನು ಹಿಡಿಯುವ ಪ್ರಯತ್ನ ಮಾಡಲಿಲ್ಲ. ಹಾಗೇನೇ ಇನ್ನೂ ಪುಟ್ಟಮ್ಮತ್ತೆಯನ್ನ ಒಬ್ಬಳೆ ಬಿಟ್ಟರೆ ಆಗದು ಎಂದು ತಿಳಿದ ಅಜ್ಜಿಯ ಕಡೆಯವರು ಆಕೆಗೆ ಹೋಟೆಲಲ್ಲಿ ದೋಸೆ ಹೊಯ್ಯುವ ವಾಸುಭಟ್ಟನಿಗೆ ಮದುವೆ ಮಾಡಿ ಕೊಡುತ್ತಾರೆ. ಇಲ್ಲಿ ಪುಟ್ಟಮ್ಮತ್ತೆಗೆ ತನ್ನ ಸಂಗಾತಿಯನ್ನು ಆರಿಸುವ ಸ್ವಾತಂತ್ರ್ಯ ಇರಲಿಲ್ಲ. ಹಿರಿಯವರು ಹೇಳಿದನ್ನು ಒಪ್ಪಿಕೊಳ್ಳಲೇಬೇಕಾದ ಪರಿಸ್ಥಿತಿ. ಹಾಗೇ ಪುಟ್ಟಮ್ಮತ್ತೆಯ ಮದುವೆ ನಡೆಯುತ್ತದೆ. ಮದುವೆಯಾಗಿ ಒಂದು ವರ್ಷಕ್ಕೆ ಒಂದು ಹೆಣ್ಣು ಮಗುವಿಗೆ ಜನ್ಮ ನೀಡುತ್ತಾಳೆ. ಆದರೆ ಆಕೆಯ ದುರಾದೃಷ್ಟಕ್ಕೆ ಗಂಡ ಅದೇ ದಿನ ಸತ್ತು ಹೋಗುತ್ತಾನೆ. ಅದು ಕೊಲೆಯೆಂದು ತಿಳಿದರೂ ಕೂಡ ಈಕೆಗೆ

ಕೇಸು ಹಾಕಿ ನ್ಯಾಯ ಕೇಳುವಷ್ಟು ಧೈರ್ಯವಿರಲಿಲ್ಲ. ಎಲ್ಲರೂ ಕೋರ್ಟಿಗೆ ಹಾಕು ಎಂದು ಸಲಹೆ ನೀಡುತ್ತಾರೆ "ಆದರೆ ಪುಟ್ಟಮ್ಮತ್ತೆ ದುಡ್ಡಿದ್ದವರೆದುರು ತನ್ನಂಥ ಬಡವಿ ವ್ಯಾಜ್ಯ ಮಾಡುವುದು ಹೌದೆ? ತನ್ನ ಸಾಕಜ್ಜಿಯ ಧೈರ್ಯ ತನ್ನದಲ್ಲ"[೧೧]. ಎಂದು ಹೇಳಿ ಸುಮ್ಮನಾಗುತ್ತಾಳೆ. ತನ್ನ ಹೆಣ್ಣು ಮಗಳನ್ನು ಸಾಕುವ ಸಲುವಾಗಿ ರಂಗಪ್ಪಯ್ಯನ ಮನೆಯಲ್ಲಿ ಖಾಯಂ ಕೆಲಸಕ್ಕೆ ಸೇರುತ್ತಾಳೆ. "ಎಲ್ಲಿಯವರೆಗೆಂದರೆ ಅವಳು ವಿಶೇಷಗಟ್ಟಲೆಯ ಅಡುಗೆಗೋ ಊಟಕ್ಕೋ ಇನ್ನೊಬ್ಬರ ಮನೆಗೆ ಹೋದಳೆಂದರೆ ರಂಗಪ್ಪಯ್ಯನ ಹೆಂಡತಿ ಈದಪ್ಪ ಮುಖ ಮಾಡಿಕೊಂಡಳೆಂದೇ. ಪುಟ್ಟಮ್ಮನಿಲ್ಲವೇ ಎಂದು ಕೇಳಿಕೊಂಡು ಬಂದವರಿಗೆ 'ಇಲ್ಲದೆ ಸತ್ತಿತೇ? ಯಾರ ಮನೆ ಕೂಳು ಹೆಕ್ಕುಕೆ ಹೋಯಿತ್ತೋ' ಎಂದು ಆಕೆ ಸೊಡ್ಡು ಮುರಿಯುವ ಸುದ್ದಿ ಪುಟ್ಟಮ್ಮನ ಕಿವಿಯ ಮೇಲೆಯೂ ಬಿದ್ದಿಲ್ಲವೆಂದಲ್ಲ. ಆದರೆ ಗಂಡು ದಿಕ್ಕು ಇಲ್ಲದಿದ್ದ ಮೇಲೆ ಅಂಥ ಮಾತು ಕೇಳಬಾರದು. ಇಂಥ ಮಾತು ಬೀಳಬಾರದು ಅಂದುಕೊಳ್ಳುತ್ತ ಹೋದರೆ 'ಹಸೆಗೆ ಹಿಡಿದ ಹೇಲಿನ ಹಾಂಗೆ' ಅಲ್ಲೇ ಇದ್ದರೆ ಸೈ ಚಂಯ್ಯ ಮರ್‍ಕತ. ಸೊಡ್ಡು ಮುರಿದರೆ ಅವಳ ಕುತ್ತಿಗೆಯೇ ವಾರೆಯಾದೀತು ಎಂದ ಪುಟ್ಟಮ್ಮ ಊಟಕ್ಕೆ ಹೋಗುವುದನ್ನು ಬಿಡಲಿಲ್ಲ. ಬಿಟ್ಟರೆ ದಕ್ಷಿಣೆ ದುಡ್ಡನ್ನೂ ಬಿಟ್ಟಂತಲ್ಲವೇ?"[೧೨] ಆಮೇಲೆ ಮಗಳನ್ನು ಮದುವೆ ಮಾಡಿ ಕೊಡುತ್ತಾಳೆ. ಹಾಗೇ ಮದುವೆಯಾಗಿ ಹೋದ ಮಗಳು ನಂತರ ಹೆರಿಗೆಗೆಂದು ತವರು ಮನೆಗೆ ಬರುತ್ತಾಳೆ. ಆದರೆ ಆಕೆ ಕೂಡ ಒಂದು ಹೆಣ್ಣು ಮಗುವಿಗೆ ಜನ್ಮ ನೀಡಿ ಸತ್ತುಹೋಗುತ್ತಾಳೆ. ಆ ನಂತರ ಆ ಅನಾಥೆಯಾದ ಮಗುವಿಗೆ ಕಮಲಾವತಿ ಎಂದು ನಾಮಕರಣ ಮಾಡಿ ಈಕೆಯೇ ಸಾಕುತ್ತಾಳೆ. ಹೀಗೆ ಪುಟ್ಟಮ್ಮತ್ತೆ ಒಂದು ಗಂಡಿನ ಸಹಾಯವಿಲ್ಲದೇ ತಾನೇ ದುಡಿದು ಬದುಕು ಸಾಗಿಸುತ್ತಾಳೆ. ಕಮಲಾವತಿಯನ್ನ ತಾಯಿಯಿಲ್ಲದ ತಬ್ಬಲಿ ಎಂದು ಪ್ರೀತಿಯಿಂದ, ಯಾವುದೇ ಕೊರತೆ ಬಾರದಂತೆ ಸಾಕುತ್ತಾಳೆ. ಹೀಗೆ ಈ ಪುರುಷ ಸಮಾಜದಲ್ಲಿ ಪುಟ್ಟಮ್ಮತ್ತೆ ಕಷ್ಟಪಟ್ಟು ಜೀವನ ನಡೆಸುತ್ತಿರುತ್ತಾಳೆ. ಆಕೆಗೆ ಮೇಲ್ವರ್ಗದವರು ನಡೆಸುವ ದಬ್ಬಾಳಿಕೆಯನ್ನ ಎದುರಿಸುವ ಧೈರ್ಯ ಕೂಡ ಇರುವುದಿಲ್ಲ. ಅವಳು ಬೇರೆಯವರ ಮನೆಯಲ್ಲಿ ಕೆಲಸಮಾಡಿದರೂ ಕೂಡ ಆಕೆ ಬಾಯಿಬಿಟ್ಟು ಸಂಬಳ ಕೇಳುತ್ತಿರಲಿಲ್ಲ. ಅವರು ಕೊಟ್ಟಿದ್ದನ್ನು ತೆಗೆದುಕೊಂಡು ಬರುತ್ತಿದ್ದಳು. ಹೀಗೆ ಪುಟ್ಟಮ್ಮತ್ತೆಗೆ ಎಲ್ಲಾ ರೀತಿಯ ಕಷ್ಟವನ್ನ ಎದುರಿಸಿ ಬದುಕುವುದು ಅಭ್ಯಾಸವಾಗಿ ಹೋಗಿತ್ತು. ಆದರೆ ಆಕೆಯ ಮೊಮ್ಮಗಳಾದ ಕಮಲಾವತಿ ಪುಟ್ಟಮ್ಮತ್ತೆಯಂತಲ್ಲ. ಆಕೆ ಕ್ರೌರ್ಯವನ್ನ ಎದುರಿಸಿ ನಿಲ್ಲುವ ಧೈರ್ಯವಂತೆ ಹೆಣ್ಣಾಗಿ ಕಂಡುಬರುತ್ತಾಳೆ.

"ಕಮಲಾವತಿಯ ಪ್ರಾಯ ತನ್ನ ಪ್ರಾಯದಂತಲ್ಲ. ದಕ್ಷಿಣೆ ದುಡ್ಡಿನಲ್ಲಿ ತಾನು ದಿನ ದೂಡಿದೆನೆಂದರೆ ಕಮಲಾವತಿಗೆ ಅದು ಸಾಧ್ಯವಿಲ್ಲವೆಂದು ಪುಟ್ಟಮ್ಮತ್ತೆಗೂ ಗೊತ್ತಾಗಿದೆ. 'ದುಡ್ಡ್ ಕೇಂಡ್ರೆ ಯೇನಾತ್?' ಎಂದು ಕೆಲಸ ಮುಗಿಸಿ ಮರಳುವ ಅಜ್ಜಿಯನ್ನು ಕಮಲಾವತಿ ಕೇಳುತ್ತಾಳೆ. ಅವತ್ತೊಂದು ದಿನ ಬೇಣದ ಮನೆ

ಶಾಮರಾಯರ ಮನೆಯಲ್ಲಿ ಪುಟ್ಟಮ್ಮತ್ತೆ ಬಡಿಸಲು ಹೋದಾಗ ತಾನೂ ಸೇರಿಕೊಂಡಳು. ಆಗ ಊಟಕ್ಕೆ ಕುಳಿತಿದ್ದ ಕೆಳಕೇರಿ ಬಾಬು ಎಂಬವ ಕಣ್ಣು ಹೊಡೆದನಂತೆ. ಒಂದು ಸೌಟು ಬಿಸಿ ಸಾರನ್ನೇ ಅವನ ತಲೆಯ ಮೇಲೆ ಹೊಯ್ದೇ ಬಿಟ್ಟಳು. ಮನೆಗೆ ಮರಳುವಾಗ ಅಜ್ಜಿಯ ಪರವಾಗಿ ಶಾಮರಾಯರ ಹೆಂಡತಿಯ ಬಳಿ ತಾನೇ ಐದು ರೂಪಾಯಿ ಕೇಳಿ ಗೆದ್ದುಕೊಂಡೇ ಬಂದಳು"[೧೩] ಹೀಗೆ ಆಕೆ ತನ್ನ ಸುದ್ದಿಗೆ ಬಂದವರನ್ನು ಸುಮ್ಮನೆ ಬಿಡುತ್ತಿರಲಿಲ್ಲ.

ಕಮಲಾವತಿ ಎಷ್ಟೋ ಪುರುಷ ದೌರ್ಜನ್ಯವನ್ನ ಹಾಗೂ ಬಡವರ ಮೇಲೆ ಆಗುತ್ತಿರುವ ಶೋಷಣೆಯನ್ನ ಖಂಡಿಸುವ ಪ್ರಯತ್ನ ಮಾಡುತ್ತಾಳೆ, ಕಮಲಾವತಿಯ ಜೊತೆ ಬೆಳೆದವಳು ಸೌಧಾಮಿನಿ. ಆಕೆಯನ್ನ ನೋಡಲು ಬಂದ ಹುಡುಗ ಕಮಲಾವತಿಯನ್ನ ನೋಡಿ ಮುಗುಳು ನಕ್ಕ ಅಷ್ಟೆ. ಆಮೇಲೇ ಈಕೆ ಬಡವಳೆಂದು ತಿಳಿದು ಸುಮ್ಮನಾದ. ಆಮೇಲೆ ಸೌಧಾಮಿನಿಯೊಂದಿಗೆ ಮದುವೆ ನಿಶ್ಚಯವಾಯಿತು. ಆಕೆಯ ಮದುವೆಯಲ್ಲಿ ಕಮಲಾವತಿ ತುಂಬಾ ಓಡಾಡಿದಳು. ಆದರೆ ಕಮಲಾವತಿಯನ್ನ ಇಷ್ಟಪಟ್ಟು ಆಕೆಯ ಬಗ್ಗೆ ಕೇಳಿದವರು ಮುಂದೆ ಮಾತನಾಡುತ್ತಿರಲಿಲ್ಲ. ಏಕೆಂದರೆ ಕಮಲಾವತಿ ಬಡವಳು ಎಂಬ ಕಾರಣಕ್ಕೆ ಈ ಪುರುಷ ಸಮಾಜದಲ್ಲಿ ಬಡವರಿಗೆ ಯಾವುದೇ ಬೆಲೆ ಇಲ್ಲ. ಹಾಗಾಗಿ ಕಮಲಾವತಿ ನೋಡಲು ಎಷ್ಟೇ ಚೆನ್ನಾಗಿದ್ದರೂ ಕೂಡ ಆಕೆ ಬಡವಳು, ಅವಳಲ್ಲಿ ಚಿನ್ನ, ಅಂತಸ್ತು ಇಲ್ಲ ಎಂದು ತಿಳಿದ ಮೇಲೆ ಯಾರೂ ಮಾತು ಮುಂದುವರಿಸುತ್ತಿರಲಿಲ್ಲ. ಪುಟ್ಟಮ್ಮತ್ತೆಗೆ ಕಮಲಾವತಿಯ ಮದುವೆಯ ಚಿಂತೆ ಕಾಡುತ್ತದೆ. ಹಾಗಾಗಿ ಕಮಲಾವತಿಗೆ ಗಂಡು ಹುಡುಕಲು ಪರಮೇಶ್ವರರಾಯರಿಗೆ ಹೇಳಿದಾಗ, ಆತ "ಒಹೋ, ಅದಕ್ಕೇನಾಯ್ಕ್? ಎಂದವ ತುಸು ತಡೆದು, 'ಪುಟ್ಟಮ್ಮತ್ತೆ, ನಮ್ಮಲ್ಲಿಪ್ಪ್ ಮರಿಯಣ್ಣ ಹೆಂಗೆ? ಇಲ್ಲಿಗೆ ಬಂದಿದ್ನಲೆ, ನೀವೂ ಕಂಡಿಪ್ರಿ. ನಿಮ್ಮ ಮೊಮ್ಮಗಳ್. ಎಂಥಾ ಚುರುಕಂತೀ ನೀರಿಲ್ಲದಲ್ಲಿ ನೀರು ಹುಟ್ಟಿಸಿ ಕಂಡ್‌ಬಪ್ಪ. ನನ್ನ್ ವ್ಯವಹಾರ ಎಲ್ಲ ಕಂಡ್ಕಂಬುದು ಯಾರೆಂತ ಮಾಡ್ಡೆ. ಕಾಂಬೂಕೂ ಮನ್ಮಥ. ಹಣ್ಣು ಗೆಂಪು, ಹಣ್ಣುಗೆಂಪು ಒಡೀತಾ"[೧೪]– ಅವನ ಮಾತು ಮುಗಿದು, ಪುಟ್ಟಮ್ಮತ್ತೆಗೆ ಸರಿಯಾಗಿ ಅರ್ಥವಾಗುವುದರೊಳಗೆ "ಪರಮೇಶ್ವರಾಯರೆ, ನಿಮ್ ಮರಿಯಣ್ಣ ಅಪ್ಪು ಹಣ್ಣು ಕೆಂಪಾಯಿ ಸಾಪಿದ್ರೆ ನಂಗೇನು? ಕಚ್ಚಿ ತಿಂಬುಕಾತ್ತಾ? ಬೇಕಾದ್ರೆ ನಿಮ್ಮ ಮಗ್ಳನ್ನೇ ಕೊಟ್ಬಿಡಿ"[೧೫] – ಎಂದು ಹೇಳಿ ಕಮಲಾವತಿ ಹೋಗುತ್ತಾಳೆ. ಅದನ್ನ ಕಂಡು ಪುಟ್ಟಮ್ಮತ್ತೆ "ಕಂಡ್ಯ, ಕಂಡ್ಯ ಆ ದಗಡೀನ! ಎಂದರೆ ಪರಮೇಶ್ವರನ ಹೆಂಡತಿ 'ಪುಟ್ಟಮ್ಮತ್ತೆ ಸಮಾ ನಾಕು ದಿವ್ಸ ಉಪಾಸ ಹಾಕ್. ಉಡಾಪೆಲ್ಲ ಇಳೀದೆ ಎಲ್ಲಿಗ್ ಹೋತ್!"[೧೬] ಎಂದು ಹೇಳುತ್ತಾಳೆ. ಇಲ್ಲಿ ಪರಮೇಶ್ವರನ ಹೆಂಡತಿ ಕೂಡ ಒಂದು ಹೆಣ್ಣಾಗಿ ಕಮಲಾವತಿಯ ಮನಸ್ಸನ್ನ ಅರ್ಥಮಾಡಿಕೊಳ್ಳುವುದಕ್ಕೆ ಹೋಗುವುದಿಲ್ಲ. ಅದು ಬಿಟ್ಟು ತಾನು ಶ್ರೀಮಂತೆ

ಎಂಬ ಗರ್ವದಿಂದ ಮಾತನಾಡುತ್ತಾಳೆ. ಆ ಮೇಲೆ ಅಜ್ಜಿ ಪುನಃ ಕಮಲಾವತಿಗೆ ಹಾಗಾದರೆ ನಾಲ್ಕು ದಿನ ಪರಮೇಶ್ವರನ ಮನೆಯಲ್ಲಿ

ಇದ್ದು ಬಾ ಎಂದಿದ್ದಕ್ಕೆ "ಯಂತ ಅಜ್ಜಿ ನೀ ಹೇಳುದು! ನಾ ಹುಟ್ಟಿದ್ದ್ ಆ ಪರಮೇಸನ ಹೆಂಡ್ತಿ ಕಚ್ಚೆ ತಿಕ್ಕುಕಾ?"[೧೭] ಎಂದು ಕೇಳುತ್ತಾಳೆ. ಅಂದರೆ ಕಮಲಾವತಿಗೆ ಬೇರೆಯವರ ಮನೆಯಲ್ಲಿ ಕೆಲಸ ಮಾಡುವುದು ಇಷ್ಟವಿಲ್ಲ. ಅವಳಿಗೆ ಸ್ವಂತವಾಗಿ ದುಡಿದು ಸಂಪಾದನೆ ಮಾಡಬೇಕೆಂಬ ಆಸೆ. ಮದುವೆಯಾಗುವವ ಕೂಡ ಹಾಗೇ ಇರಬೇಕೆಂಬ ಆಸೆಯೆ ಏನೋ. ಹಾಗಾಗಿ ಪರಮೇಶ್ವರನ ಮನೆಯಲ್ಲಿ ಕೆಲಸಕ್ಕೆ ಇರುವವನನ್ನ ಹೇಳಿದಾಗ ಆಕೆ ಒಪ್ಪುವುದಿಲ್ಲ.

ಕಮಲಾವತಿಗೆ ತಾನೇ ದುಡಿದು ಅಜ್ಜಿಯನ್ನು ಸಾಕಬೇಕೆಂಬ ಆಸೆ. ಹಾಗಾಗಿ ಆಕೆ ಮೀನಾಕ್ಷಿಯ ಜೊತೆ ಮೆಶಿನು ಮೆಟ್ಟಲು ಕಲಿಸಿಕೊಡುವಂತೆ ಕೇಳಿಕೊಂಡು ಅವಳೊಂದಿಗೆ ಐದು ಮೈಲು ದೂರ ಬಸ್ಸಿನಲ್ಲಿ ಹೋಗಿ ಮೆಶಿನು ಮೆಟ್ಟುವುದನ್ನು ಕಲಿಯುತ್ತಾಳೆ. ಮೀನಾಕ್ಷಿಯಿಂದ ಆಕೆಗೊಂಡು ರೆಡಿಮೇಡ್ ಅಂಗಿ ಹೊಲಿಯುವ ಕೆಲಸ ಸಿಗುತ್ತದೆ. ಮುಂದೆ ಸಂಬಳ ಜಾಸ್ತಿ ಮಾಡುವ ಎಂದವರು ನಾಲ್ಕು ವರುಷ ದುಡಿದರೂ ಹೆಚ್ಚಿಸುವುದಿಲ್ಲ. ಹಾಗಾಗಿ ರೆಡಿಮೇಡ್ ಕಾರ್ಯಾಲಯದ ಧನಿಗಳ ಗೃಹಪ್ರವೇಶದ ದಿನ ಹೋಗದೇ ಮನೆಯಲ್ಲಿಯೇ ಉಳಿಯುವ ಮೂಲಕ ತನಗಾದ ನೋವನ್ನ ಮತ್ತು ಸಿಟ್ಟನ್ನು ಮೈ ಮೇಲೆ ತಣ್ಣೀರು ಸುರಿದುಕೊಂಡು ಬರುವುದರ ಮೂಲಕ ವ್ಯಕ್ತಪಡಿಸುತ್ತಾಳೆ. ಒಟ್ಟಿನಲ್ಲಿ ಪುಟ್ಟಮ್ಮತ್ತೆಯ ತಾಯಿ, ಪುಟ್ಟಮ್ಮತ್ತೆ, ಕಮಲಾವತಿ ಎಲ್ಲರೂ ಒಂದಲ್ಲ ಒಂದು ರೀತಿಯಲ್ಲಿ ಶೋಷಣೆಗೆ ಒಳಗಾದವರೇ. ಕಮಲಾವತಿ ಸ್ವಂತವಾಗಿ ದುಡಿಮೆ ಮಾಡಬೇಕೆಂಬ ಆಸೆಯಿಂದ ಕೆಲಸಕ್ಕೆ ಸೇರಿದರೂ ಕೂಡ ಆಕೆಗೆ ಸಂಬಳ ಕೊಡದೆ ಆಕೆಯನ್ನ ಶೋಷಿಸುತ್ತಾರೆ. ಚೆನ್ನಾಗಿ ದುಡಿದು ಅಜ್ಜಿಯನ್ನ ಸಾಕಬೇಕೆಂಬ ಆಕೆಯ ಆಸೆಗಳು ಕೂಡ ನುಚ್ಚು ನೂರಾಗುತ್ತದೆ. ಆಕೆ ಮೊದಲು ಎಷ್ಟೇ ಪ್ರತಿಭಟಿಸಿದರೂ ಕೂಡ, ಈ ಪುರುಷ ಸಮಾಜದಲ್ಲಿ ಬಡವರಿಗೆ ಬದುಕುವುದಕ್ಕೆ ಯಾವುದೇ ಸ್ವಾತಂತ್ರ್ಯ ಇಲ್ಲ ಎಂಬುದನ್ನು ಕಾಣಬಹುದು.

ಸಂಪಾದನೆಯ ದುಡಿಮೆ ಗಂಡಿನ ಪ್ರತಿಷ್ಠೆಯೇ ಆಗಿರುವುದರಿಂದ, ಹೆಣ್ಣನ್ನು ದುಡಿಸಿದರೂ ಆಕೆಗೆ ಸಂಬಳವನ್ನು ನೀಡದೆ ದುಡಿಸುವ ಮೂಲಕ ಗಂಡು ತನ್ನ ಪ್ರತಿಷ್ಠೆಯನ್ನು ಉಳಿಸಿಕೊಳ್ಳುವ ಪ್ರಯತ್ನ ಮಾಡುತ್ತಾನೆ. ಸಂಪಾದನೆ ಬದುಕಿಗೆ ಸ್ವಾವಲಂಬನೆಯನ್ನು ತಂದುಕೊಡುವುದರಿಂದ, ಹೆಣ್ಣಿಗೆ ಈ ಸಂಪಾದನೆ ಪುರುಷನ ಅವಲಂಬನೆಯನ್ನು ಕಡಿಮೆ ಮಾಡಿ ಸ್ವತಂತ್ರ ಬದುಕನ್ನು ತಂದುಕೊಡುತ್ತದೆ ಎನ್ನುವುದೇ ಅರಗಿಸಿಕೊಳ್ಳಲಾಗದ ಸತ್ಯ. ಹಾಗಾಗಿ ಸ್ವಾವಲಂಬನೆಯ ಕಡೆಗೆ ತುಡಿಯುವ ಹೆಣ್ಣಿನಲ್ಲಿ ಮದುವೆಯ

ಮೂಲಕ ಕಟ್ಟಿ ಹಾಕುವ ಪ್ರಯತ್ನವನ್ನು ಮಾಡುತ್ತಾರೆ ಆದರೆ ಇಲ್ಲಿ ಕಮಲಾವತಿ ಇದನ್ನು ಮೀರಿ ಬದುಕುತ್ತಾಳೆ. ತನ್ನ ಧ್ವನಿಯನ್ನು ದಾಖಲಿಸುವಷ್ಟು ಬಲಿಷ್ಠ ಆಗಿದ್ದಾಳೆ.

'ಮರಗಿಡ ಬಳ್ಳಿ' ಕತೆಯಲ್ಲಿ ಬರುವ ಮಂದಕ್ಕಳ ಪಾತ್ರ. ಆಕೆ ಈಗ ವೃದ್ಧೆ. ಕಾಯಿಲೆ ಬಿದ್ದು ಸಾವಿನಂಚಿನಲ್ಲಿದ್ದಾಳೆ. ತಾನು ಪ್ರೀತಿಯಿಂದ ಸಾಕಿ ಬೆಳೆಸಿದ ಮಕ್ಕಳು ತಮ್ಮದೇ ಗುಂಗಿನಲ್ಲಿದ್ದಾರೆ. ತಾಯಿಯನ್ನು ಈಗ ಕೇಳುವವರೇ ಇಲ್ಲ. ತನ್ನ ಮಗಳು ಶಾರದೆ ಮತ್ತು ಅಮೇರಿಕದಲ್ಲಿರುವ ತನ್ನ ಮಗ ಸೂರ್ಯಮಾಣಿ ಬರುತ್ತಿದ್ದಾರೆ ಎಂದಾಗ ಆಕೆಗೆ ಆಗುವ ಸಂತೋಷ ಅಷ್ಟಿಷ್ಟಲ್ಲ. ಅವಳಿಗೆ ತನ್ನ ಪ್ರೀತಿಯ ಮಗಳು ಶಾರದೆ ಬರುತ್ತಿದ್ದಾಳೆ ಪತ್ರ ಹಾಕಿದ್ದಾಳೆ ಎಂದು ದೊಡ್ಡಮಗ ಶ್ರೀಧರ ಹೇಳಿದಾಗ ಮನಸ್ಸಿಗೆ ತುಂಬಾ ಸಂತೋಷವಾಗುತ್ತಿದೆ. ಹಿಂದೆ ಅವಳು ಬರುತ್ತಾಳೆ ಎಂದು ಗೊತ್ತಾದಾಗ ಗೇಟಿನ ಬಳಿಯೇ ನಿಂತು ಕಾಯುತ್ತಾ ಇರುತ್ತಿದ್ದುದು ನೆನಪಿಗೆ ಬಂದು ಈ ಬಾರಿ ಬರುವಾಗ ಅದು ಸಾಧ್ಯವಿಲ್ಲವೆಂದೂ ದು:ಖವಾಗುತ್ತದೆ. ಹೀಗೆ ಸೂರ್ಯಮಾಣಿಯ ಬಗೆಗೂ ಯೋಚಿಸುತ್ತಿರುತ್ತಾಳೆ. ಶಾರದೆಯ ಪತ್ರ ಬಂದು ಮರುದಿನವೇ ಅವಳು ಬರುತ್ತಾಳೆ. ಶಾರದೆ ಬಂದ ಸುದ್ದಿ ಕೇಳಿ ಹೊರಗೋಡಬೇಕೆಂದು ಆಸೆಯಾಗುತ್ತದೆ. ಆದರೆ ಸಾಧ್ಯವಾಗುವುದಿಲ್ಲ. ಅಷ್ಟರಲ್ಲೇ "ಅಮ್ಮಾ... ಅಮ್ಮಾ ..... ಎಂದು ಮಾರ್ದವತೆಯೇ ತುಂಬಿನಿಂತ ಧ್ವನಿ ಕೇಳಿಸುತ್ತದೆ"[೧೮] ತುಂಬಾ ಬೇಸರದಿಂದ ಕಣ್ಣೀರಿಡುತ್ತಾಳೆ. ಹೀಗೆ ಬಂದ ಮಗಳು ಸ್ವಲ್ಪ ಹೊತ್ತು ಕೂತು ಮತ್ತೆ ಹೊರಗೆ ಹೋದವಳು ಮತ್ತೆ ತಡವಾಗಿ ಒಳಗೆ ಬಂದು ಮೂಸುಂಬಿ ಹಣ್ಣು ತಂದಿದ್ದೇನೆ ತಿನ್ನಿಸುತ್ತೇನೆ ಎಂದು ಹೇಳಿ ಕೊಡುವಷ್ಟರಲ್ಲಿ ಅಲ್ಲಿಗೆ ಬಂದ ಸೊಸೆಗೆ "ಆದಷ್ಟೂ ಅಮ್ಮನ ಚಾಕರಿ ಮಾಡುವುದು. ಮತ್ತೆ ಮನೆಗೆ ಹೋದ ಮೇಲೆ ನನಗೆ ಆ ಯೋಗ ಸಿಗಲೇ ಇಲ್ಲ ಎಂತ ನಾನು ಕೊರಗಬಾರದಲ್ಲ"[೧೯] ಎನ್ನುತ್ತಾಳೆ. ಇದನ್ನು ಕೇಳಿ ವೃದ್ಧೆಯ ಮನಸ್ಸಿಗೆ ತುಂಬಾ ನೋವಾಗುತ್ತದೆ. ಹಾಗೂ ಸಿಟ್ಟು ಕೂಡ ಬರುತ್ತದೆ. ಬಾಯಿಗೆ ಹಾಕಿದ ಮೂಸುಂಬಿಯನ್ನು ತಿನ್ನದೇ ಉಗಿಯುವ ಮೂಲಕ ತನ್ನ ಸಿಟ್ಟನ್ನು ವ್ಯಕ್ತಪಡಿಸುತ್ತಾಳೆ. ಹೀಗೆ ಸೂರ್ಯಮಾಣಿ ಬಂದ ನಂತರ ಮಕ್ಕಳೆಲ್ಲಾ ಕೂತು ತನ್ನನ್ನು ಚಾಕರಿ ಮಾಡುವುದು ಕಷ್ಟವೆಂದು ಮಾತಾಡಿಕೊಳ್ಳುವುದು ಕೇಳಿಸಿಕೊಂಡು ಮನಸ್ಸಿಗೆ ತುಂಬಾ ಸಂಕಟವಾಗುತ್ತದೆ. ಆಕೆಗೆ "ಸತ್ತ ಅಮ್ಮ ಎದ್ದು ಬಂದು ನಕ್ಕಂತಾಗುತ್ತದೆ". ವರ್ಷಗಟ್ಟಲೆ ಸಮೃದ್ಧವಾಗಿ ಫಲಕೊಡುತ್ತಿದ್ದ ಗೋವೆ ಮರಕ್ಕೆ ವರಳೆ ಹಿಡಿದು ಲಡ್ಡು ಆದಾಗ ಅದನ್ನು ತಾನು ಕಡಿಸಿದ್ದು ನೆನಪಾಗಿ, ಆ ಕೊಡಲಿಯೇಟು ಎರಡು ಪಟ್ಟು ಜೋರಿನಿಂದ ನನ್ನ ಎದೆಯ ಮೇಲೆಯೇ ಬಿದ್ದಂತಾಗುತ್ತದೆ.

ಎಂಟು ಹತ್ತು ಕರುಗಳಿಗೆ ಜನ್ಮಕೊಟ್ಟು, ಧಾರಾಳ ಹಾಲುಕೊಟ್ಟು ಮುದಿಯಾಗಿ ಉಪಯೋಗವಿಲ್ಲದೆ ಕೊಟ್ಟಿಗೆಯಲ್ಲಿದ್ದ ಕಾಶೀ ದನವನ್ನು ಚೀಂಕ್ರನೊಡನೆ ಹೊಡೆದುಕೊಂಡು ಹೋಗಲು ಹೇಳಿದ್ದು. ಕಾಶಿ ಗೇಟಿನಿಂದ ಹೊರಗೆ ಹೋಗಲು ಒಪ್ಪದಿದ್ದಾಗ ಪೆಟ್ಟುಕೊಟ್ಟು ಕಳಿಸಿದ್ದು, ಅದು ಅಂಬಾ ಎಂತ ಮೇಲಿಂದ ಮೇಲೆ ಕೂಗುತ್ತಾ ಹಿಂದೆ ಹಿಂದೆ ನೋಡುತ್ತ ಹೋದದ್ದು ಎಲ್ಲಾ ಈಗಾಗಲೇ ಯಾಕೆ ನೆನಪಾಗುತ್ತದೆ?"[೨೦] ಹೀಗೆಲ್ಲಾ ಯೋಚನೆ ಮಾಡುತ್ತಾಳೆ. ಅವಳ ಸ್ಥಿತಿ ಕೂಡ ಒರಳೆ ಹಿಡಿದ ಗೇರುಮರದಂತೆ ಮನುಷ್ಯನ ಸ್ಥಿತಿ, ಗತಿಯನ್ನು ಸಸ್ಯ ಮತ್ತು ಪ್ರಾಣಿಯ ಮೂಲಕ ತಿಳಿಹೇಳುವ ಪ್ರಯತ್ನ.

ಮಕ್ಕಳು ಸೇರಿ ವೃದ್ಧೆಯನ್ನು ನೋಡಿಕೊಳ್ಳಲು ದಾದಿಯನ್ನು ನೇಮಕ ಮಾಡುವುದಾಗಿ ನಿರ್ಧಾರ ಮಾಡುತ್ತಾರೆ. ಇದನ್ನೆಲ್ಲಾ ಕೇಳಿ ತುಂಬಾ ಅಳುತ್ತಾಳೆ. ವೃದ್ಧೆಯಾದ ಮಂದಕ್ಕಳ ಬದುಕನ್ನು ಚಿಂತಾಜನಕವಾಗಿ ಲೇಖಕಿ ಚಿತ್ರಿಸಿದ್ದನ್ನು ಕಾಣಬಹುದು. ಒಬ್ಬರಿಂದ ಯಾವುದೇ ಉಪಯೋಗ ಇಲ್ಲ ಎಂದಾಗ ಜನ ಎಷ್ಟು ಕಡೆಗಣಿಸುತ್ತಾರೆ ಎಂಬುದು ಈ ಕತೆಯ ಮೂಲಕ ಕಂಡು ಬರುತ್ತದೆ.

'ಒಂದು ಅಪರಾಧ ತನಿಖೆ' ಯಲ್ಲಿ ಬರುವ ಕುಸುಮ ಮತ್ತು ಬಾಬಿಯ ಚಿತ್ರಣ ಇಬ್ಬರಲ್ಲೂ ವೈದೃಶ್ಯವಿದೆ. ಕುಸುಮ ಶ್ರೀಮಂತ ಮನೆಯ ಹೆಣ್ಣು. ಆಕೆಯ ಭಾವನೆಗಳೇ ಬೇರೆ ಇರುತ್ತವೆ. ಹಾಗಾಗಿ ತನ್ನ ಭಾವನೆಗೆ ತಕ್ಕ ಗಂಡ ಸಿಗದ ಕಾರಣ ಮದುವೆಯಾಗಿ ಆತನೊಂದಿಗೆ ಸಂಸಾರ ಮಾಡಕ್ಕಾಗದೇ ಆತನನ್ನು ಬಿಟ್ಟು ತವರು ಮನೆಯಲ್ಲಿ ಉಳಿಯುತ್ತಾಳೆ. ಅದೇ ಬಡ ಕುಟುಂಬದಲ್ಲಿ ಬೆಳೆದ ಬಾಬಿ, ಆಕೆ ಮದುವೆಯಾಗಿ ಹೋದ ಗಂಡನ ಮನೆಯಲ್ಲಿ ಅನೇಕ ಸಮಸ್ಯೆಗಳಿದ್ದರೂ ಕೂಡ ಅದನ್ನೆಲ್ಲಾ ಸರಿಪಡಿಸಿ ಗಂಡನೊಂದಿಗೆ ರಾಜಿ ಮಾಡಿಕೊಂಡು ಸುಖವಾಗಿ ಬದುಕು ಸಾಗಿಸುತ್ತಾಳೆ. ಅಂದರೆ ಬಾಬಿಯ ತಾಯಿ ಆಕೆಗೆ ಮದುವೆ ಮಾಡಿದಾಗ ಆ ಹುಡುಗನ ಬಗ್ಗೆ ಏನೂ ವಿಚಾರಿಸದೇ, ಒಬ್ಬ ಗಂಡು ಸಿಕ್ಕಿದರೆ ಸಾಕು ಎಂಬ ರೀತಿಯಲ್ಲಿ ಮದುವೆ ಮಾಡಿಸಿ ಬಿಡುತ್ತಾಳೆ. ಅದಕ್ಕೆ ಬಾಬಿಗೆ ತಾಯಿಯ ಮೇಲೆ ಸಿಟ್ಟಿದೆ "ಎಂತಹವನಿಗೆ ಮದುವೆಮಾಡಿಸಿ ಬಿಟ್ಟರು ಕಂಡಿರ ಗೌರಕ್ಕ, ಬಿಳಿ ಚರ್ಮವಿದ್ದರಾಯಿತೆ? ಅವನಿಗೆ ಮೊದಲೇ ಹೆಂಡತಿ ಇದೆಯಂತೆ ಅದಕ್ಕೆ ಮಕ್ಕಳಿಲ್ಲವಂತೆ. ಪಿರ್ಕಿಯಂತೆ ಅದನ್ನು ಬಿಟ್ಟು ನನ್ನನ್ನು ಮದುವೆಯಾದನಂತೆ ಊರು ತುಂಬ ಮೇವು ಬೇರೆ..."[೨೧] ಹೀಗೆ ಹೇಳುವ ಬಾಬಿಯ ಮನಸ್ಸಲ್ಲಿ ತಾಯಿಯ ಮೇಲೆ ಬೇಸರವಿದೆ. ಆದರೂ ತನಗೆ ಇಷ್ಟೆಲ್ಲಾ ಮೋಸ ಆಗಿದ್ದರೂ ಕೂಡ ಬಾಬಿ ಆಕೆಯ ತಾಯಿ ಮಾಡಿದ ತಪ್ಪನ್ನೇ ಇಲ್ಲಿ ಮಾಡುತ್ತಾಳೆ. ಅಂದರೆ ಬಾಬಿ ತನ್ನ ಮಗಳಿಗೆ ಮದುವೆ ಮಾಡಲು ನಿರ್ಧಾರ ಮಾಡಿದ್ದಾಳೆ. ಅದನ್ನ ಗೌರಕ್ಕನೊಂದಿಗೆ ಹೇಳುತ್ತಾಳೆ. ಯಾರಿಗೆ ಮದುವೆಯೆಂದು ಕೇಳಿದಾಗ "ಇದಕ್ಕೇ. ಮತ್ತೆ ಯಾರಿಗೆ? ಹುಡುಗ

ಸಿಕ್ಕಿದ, ಸಿಕ್ಕಿದಾಗ ಬಿಟ್ಟುಕೊಂಡರೆ ಮತ್ತೆ ಯಾರು ಸಿಕ್ಕುತ್ತಾನೋ. ಅಥವಾ ಸಿಕ್ಕಿವುದೇ ಇಲ್ಲವೋ. ಅದಕ್ಕೆ ಮಾಡಿಬಿಡುವ ಎಂತ ಜವಾಬ್ದಾರಿ ಕಳೆದಂತಾಗುವುದುದಲ್ಲ"[೨೨]- ಅದಕ್ಕೆ ಗೌರಕ್ಕ "ನಿನ್ನ ಕರ್ಮಕ್ಕ ಇಷ್ಟು ಬೇಗ ಮದುವೆ ಮಾಡುವುದು"[೨೩] ಎಂದು ಕೇಳಿದ್ದಕ್ಕೆ "ಹೂಂ. ಈಗಲೇ ಸಮ ನಿಮಗೊತ್ತಿಲ್ಲ. ಆಮೇಲೆ ಅಂಥವ ಬೇಡ ಇಂಥವ ಬೇಕು ಎಂತ ಕೂತುಕೊಳ್ಳುವುದು. ಕಡೆಗೆ ಯಾರನ್ನಾದರೂ ಕಟ್ಟಿಕೊಂಡು ಓಡಿ ಹೋಗುವುದು. ಇಲ್ಲ ಗಂಡನ ಮನೆಯಲ್ಲಿ ಬೇಯಲಿಕ್ಕಾಗದೆ ಅರ್ಧ ಆಟಕ್ಕೆ ವಾಪಸ್ಸು ಬಂದವರಂತೆ ಬರುವುದು ಮಕ್ಕಳಿಗೆ ತಲೆಪೂರ ಬೆಳೆಯುವುದರೊಳಗೆ ಮದುವೆ ಮಾಡಿಬಿಡಬೇಕು ನನ್ನ ಕೇಳಿದರೆ ಬೇಗ ಂದವರಂತೆ ಬೇಗ ಎರಡು ಮಕ್ಕಳಾಗಬೇಕು. ಮತ್ತೆಲ್ಲ ಸರಿಯಾಗುತ್ತದೆ"[೨೪]. ಇಲ್ಲಿ ಬಾಬಿ ಒಂದು ಮಗಳ ತಾಯಿಯಾದಾಗ ಆಕೆ ಕೂಡ ತನ್ನ ತಾಯಿಯಂತೆ ಯೋಚಿಸಿ ಮದುವೆ ಮಾಡಿಸಲು ನಿರ್ಧರಿಸುತ್ತಾಳೆ. ಹಾಗೇ ಕುಸುಮಳ ಜೀವನದಂತೆ ತನ್ನ ಮಗಳ ಬದುಕು ಆಗದಿರುವಂತೆ ಎಚ್ಚರಿಕೆ ವಹಿಸುತ್ತಾಳೆ. ಇಲ್ಲಿ ಬಾಬಿ ತನ್ನ ಮಗಳ ಮನಸ್ಸನ್ನ ಅರ್ಥಮಾಡಿಕೊಳ್ಳಲು ಹೋಗುವುದಿಲ್ಲ. ಇಲ್ಲಿ ಮಗಳು ಯಾವುದೇ ರೀತಿಯಲ್ಲಿ ಪ್ರತಿಕ್ರಿಯಿಸುವುದೂ ಕೂಡ ಇಲ್ಲ. ಆದರೆ ಬಾಬಿ ಮಗಳಿಗೆ ಬೇಗ ಮದುವೆ ಮಾಡಲು ಮತ್ತೊಂದು ಕಾರಣವನ್ನು ಕೂಡ ಕೊಡುತ್ತಾಳೆ. ಅವಳಿಗೆ ತನ್ನ ಗಂಡನ ಮೇಲೂ ನಂಬಿಕೆಯಿರಲಿಲ್ಲ. "ಅದರ ತಲೆಯೆಲ್ಲ ಬೆಳ್ಳಗಾಗಿದೆ. ಮೈ ದೃಷ್ಟಿ ಸಮನಿಲ್ಲ ಗೌರಕ್ಕ ಇನ್ನಾದರೂ ಹೆಂಗಸರನ್ನು ಶುದ್ಧವಾಗಿ ನೋಡುವುದಿಲ್ಲ. ಅದಕ್ಕೇ ಮಗಳಿಗೆ ಬೇಗ ಮದುವೆ ಮಾಡಬೇಕೆನ್ನುವುದು"[೨೫] ಎಂಬ ಮಾತು . ಇಲ್ಲಿ ಅದಕ್ಕಿಂತ ಮೊದಲು ಆಕೆ ಗಂಡನನ್ನು ಸರಿ ಮಾಡಿದ್ದೇನೆ ಎಂದು ಹೇಳಿದರೂ ಕೂಡ ಪೂರ್ತಿಯಾದ ನಂಬಿಕೆ ಬಂದಿಲ್ಲದಿರುವುದರಿಂದ ಮಗಳ ಮದುವೆ ಮಾಡುವಂತ ಯೋಚನೆ ಮಾಡಿರುವುದು ಗೊತ್ತಾಗುತ್ತದೆ.

ಮೊದಲು ಬಾಬಿಯ ಗಂಡ ತುಂಬಾ ಕೆಟ್ಟವನಾಗಿರುತ್ತಾನೆ. ಆದರೆ ಆತನ ಎಲ್ಲಾ ಕೆಟ್ಟ ಅಭ್ಯಾಸವನ್ನು ಕೂಡ ಬಾಬಿ ಬಿಡಿಸುತ್ತಾಳೆ. ಅದನ್ನ ಆಕೆ ಮಾತನಾಡುವಾಗ "ಅವಳ ಅಡಿಕೆ ತೋಟ ಅವಳು ಮಾಡಿಸಿದ ಚಿನ್ನ ಅವಳ ಗಂಡನ ಬಿಡು ಸೂಳೆಯರು, ಚಿನ್ನವನ್ನ ಅವನು ಇವಳಿಗೆಂತ ಮಾಡಿಸಿ ಯಾವಳಿಗೋ ತೆಗೆದುಕೊಟ್ಟಿದ್ದು, ಇವಳು ಅವಳ ಮನೆ ಬಾಗಿಲಿಗೇ ಹೋಗಿ ಬಾಯಿಮಾಡಿ ಅದನ್ನು ವಾಪಸು ಪಡೆದದ್ದು, ಮಂತ್ರವಾದಿಯ ಹತ್ತಿರ ಗಂಡ ಸೂಳೆ ಮನೆಗೆ ಹೋಗದಂತೆ ಮಾಟ ಮಾಡಿಸಿದ್ದು, ಅವತ್ತಿನಿಂದ ತಾನು ಕೂತುಕೋ ಎಂದರೆ ಕೂತು ನಿಲ್ಲು ಎಂದರೆ ನಿಲ್ಲುವಂತೆ ತನ್ನ ಗಂಡ ಆದದ್ದು..... ಕತೆಯೇ ಕತೆ"[೨೬] ಹೀಗೆ ತಾನು ಕಷ್ಟಪಟ್ಟು ತನ್ನ ಗಂಡನನ್ನು ಸರಿ ಮಾಡಿದ ಕತೆಯನ್ನ ಹೇಳುತ್ತಾಳೆ.

ಆದರೆ ಇಲ್ಲಿ ಕುಸುಮ ವಿದ್ಯಾವಂತೆಯಾಗಿದ್ದೂ ಕೂಡ ಗಂಡನೊಂದಿಗೆ ಹೊಂದಿಕೊಂಡು ಹೋಗಕ್ಕಾಗದೆ ಗಂಡನ್ನ ಬಿಟ್ಟು ಬಂದಿದ್ದನ್ನ ಬಾಬಿ "...... ಅಲ್ಲ ಗಂಡನ್ನ ಬಿಟ್ಟು ಬಂದದ್ದು ಯಾಕೆ ಎಂತ? ಕುಡುಕನ, ಸೂಳೆಗಾರನ, ಅಥವಾ ನಿಮಗೆ ಹೊಡೆಯುತ್ತಿದ್ದನ..."[೭] ಹೀಗೆ ಪ್ರಶ್ನೆ ಹಾಕುತ್ತಾ ಗಂಡನ ಮನೆಯವರ ಬಗ್ಗೆನೂ ಕೇಳಿ 'ನಾವು ಒಳ್ಳೆಯವರಾದರೆ ಅವರೂ ಒಳ್ಳೆಯವರೇ' ಎಂದು ಹೇಳುತ್ತಾಳೆ. ಅಂದರೆ ಇಲ್ಲಿ ಬಾಬಿ ಬಡವಳಾಗಿದ್ದು, ಗಂಡನೊಂದಿಗೆ ಹೊಂದಿಕೊಂಡು ಬಾಳುವೆ ಮಾಡುತ್ತಾಳೆ. ಆದರೆ ಕುಸುಮ ಸಂಪ್ರದಾಯವನ್ನು ತೊರೆದು ಗಂಡನನ್ನೇ ಲೆಕ್ಕಿಸದೇ ಆತನನ್ನು ಬಿಟ್ಟು ಬರುತ್ತಾಳೆ.

ಮಗಳ ಸುರಕ್ಷಿತ ನೆಲೆಯ ಜೀವನವನ್ನು ಅಪೇಕ್ಷಿಸುತ್ತಲೇ ಮತ್ತೆ ಒಂದು ಸಾಂಪ್ರದಾಯಿಕ ಸುರಕ್ಷಿತ ಚೌಕಟ್ಟನ್ನು ಹೇರಿಕೊಳ್ಳುವುದಕ್ಕೆ ಮುನ್ನಡೆಯುತ್ತಾರೆ.

## ೪.೩ ನಡೆದಾಟದ ಸ್ತ್ರೀ ಆಕೃತಿಗಳು

'ಸೌಗಂಧಿಯ ಸ್ವಗತಗಳು' ಕತೆಯಲ್ಲಿ ಬರುವ ಅವಿವಾಹಿತ ಹೆಣ್ಣು ಸೌಗಂಧಿ ಲೈಂಗಿಕ ಸ್ವಾತಂತ್ರ್ಯಕ್ಕಾಗಿ ಹಾತೊರೆಯುವ ಹೆಣ್ಣಾಗಿ ಕಂಡು ಬರುತ್ತಾಳೆ. ಆದರೆ ಯಾರ ಮುಂದೆಯೂ ಆ ಆಸೆಯನ್ನು ಬಿಚ್ಚಿಡಲು ಸಾಧ್ಯವಾಗದೇ ತನ್ನ ಮನಸ್ಸಲ್ಲೇ ಬಚ್ಚಿಟ್ಟುಕೊಂಡು ಜೀವನ ನಡೆಸುತ್ತಾಳೆ. ಸೌಗಂಧಿ ಸ್ವತಂತ್ರವಾಗಿ ಬದುಕಲು ಇಚ್ಛೆ ಪಟ್ಟು ಮನೆಯಿಂದ ದೂರದ ಊರಿಗೆ ಕೆಲಸವನ್ನ ವರ್ಗಾವಣೆ ಮಾಡಿಸಿಕೊಂಡು ಬಂದು ಬಾಡಿಗೆ ಮನೆಯಲ್ಲಿ ವಾಸವನ್ನ ಪ್ರಾರಂಭ ಮಾಡುತ್ತಾಳೆ.

ಸೌಗಂಧಿ ಸಂಪ್ರದಾಯಸ್ಥ ಮನೆತನದ ಹೆಣ್ಣು. ಆಕೆ ವಿದ್ಯಾವಂತೆ. ಉದ್ಯೋಗ ಕೂಡ ಇದೆ. ಆದರೆ ಇನ್ನೂ ಮದುವೆಯಾಗಿಲ್ಲ. ಆಕೆಯ ತಂಗಿಯರಿಬ್ಬರೂ ಮದುವೆಯಾಗಿ ಸುಖವಾಗಿ ಸಂಸಾರ ನಡೆಸುತ್ತಿದ್ದಾರೆ. ಹಾಗಾಗಿ ಮನೆಯವರಿಗೆ ಈಕೆಯ ಮದುವೆಯ ಚಿಂತೆ. ಈಕೆಯ ಪರಿಚಯಸ್ಥರೆಲ್ಲರೂ ಯಾಕೆ ಇನ್ನೂ ಮದುವೆಯಾಗಿಲ್ಲ ಎಂಬುದಾಗಿ ಕೇಳುತ್ತಿರುತ್ತಾರೆ. ಆಗ ಈಕೆಯ ಮನಸ್ಸಿಗೆ ತುಂಬಾ ಬೇಸರವಾಗುತ್ತದೆ. ಮತ್ತು ಮನೆಯವರು ಕೂಡ ಈಕೆಯ ಮದುವೆ ಮಾಡಲು ಪ್ರಯತ್ನಿಸಿ ಸೋಲುತ್ತಾರೆ. ಅದನ್ನೆಲ್ಲಾ ಕಂಡು ಈಕೆಗೆ ಮನೆಯಲ್ಲಿರುವುದು ಕಷ್ಟವಾಗಿ, ಎಲ್ಲರನ್ನೂ ಬಿಟ್ಟು ದೂರದೂರಿಗೆ ಹೋಗಿ ಸ್ವತಂತ್ರವಾಗಿ ಬದುಕಲು ನಿರ್ಧರಿಸುತ್ತಾಳೆ. ಹಾಗಾಗಿ ತನ್ನ ಕೆಲಸವನ್ನು ಬೇರೆ ಊರಿಗೆ ವರ್ಗಾವಣೆ ಮಾಡಿಸಿಕೊಳ್ಳುತ್ತಾಳೆ. ಇದರಿಂದ ಸೌಗಂದಿಯ ಮನಸ್ಸಿಗೆ ನೆಮ್ಮದಿ ಸಿಕ್ಕಿದರೂ ಹೆತ್ತವರಿಗೆ ಒಬ್ಬಳನ್ನೇ ಅಷ್ಟೂ ದೂರ ಕಳಿಸಲು ಭಯ. ಆದರೂ ಕಳಿಸುವುದು ಅನಿವಾರ್ಯ. ಹಾಗಾಗಿ ಅಪ್ಪನೇ ಸೌಗಂಧಿಯೊಂದಿಗೆ

ಹೋಗಿ ಬಾಡಿಗೆ ಮನೆ ಗೊತ್ತುಮಾಡಿ ಬರುತ್ತಾರೆ. ಆ ಮನೆಯ ಒಡತಿ ವಿಧವೆ ಎಂಬುದು ಅಪ್ಪನಿಗೆ ಸಮಾಧಾನ ತರುತ್ತದೆ. ಇಲ್ಲಿ ಮಗಳ ಮೇಲೆ ನಂಬಿಕೆ ಇದೆ. ಹಾಗೆನೇ ಜವಾಬ್ದಾರಿ ಕೂಡ ಇದೆ. ಹಾಗಾಗಿ ಮನೆಯ ಹೆಂಗಸಿನೊಂದಿಗೆ ಸೌಗಂಧಿಯ ಬಗ್ಗೆ ಎಲ್ಲವನ್ನೂ ತಿಳಿಸಿ ತಮ್ಮ ಜವಾಬ್ದಾರಿಯನ್ನ ನಿಮಗೆ ವಹಿಸುತ್ತಿದ್ದೇನೆ ಎಂಬುದಾಗಿ ಹೇಳುತ್ತಾರೆ. ಮತ್ತೆ ತನ್ನ ಮಗಳ ಬಗ್ಗೆ ವಿವರಣೆಯನ್ನು ಕೂಡ ಕೊಡುತ್ತಾರೆ. "ಮನೆ ನೋಡಲು ಬಂದಾಗಲೇ ಒಡತಿಯ ಎದುರು ಇತಿಹಾಸ ಬಿಚ್ಚಿಟ್ಟಿದ್ದರು ಅಪ್ಪ. ನೋಡಿ, ಕಡೆಗೂ ಮದುವೆ ಮಾಡಲಿಕ್ಕೆ ಆಗಲಿಲ್ಲ. ಇವಳ ತಂಗಿಯರಿಬ್ಬರಿಗೂ ಆಯಿತು.... ಇವಳ ವಿಷಯದಲ್ಲಿ ಒಂದು ಸೋತೆ? ಆಗಲೇ ಮನೆಯೊಡತಿಯ ಮುಖದಲ್ಲಿ ಕರುಣೆಯ ಗೆರೆಗಳು ಮೂಡತೊಡಗಿದ್ದುವು. ತಂದೆ ತೃಪ್ತಿಯಾಗುತ್ತ ಮಾತು ಮುಂದುವರಿಸಿದ್ದರು. 'ಹುಡುಗಿಯನ್ನು ನೀವೇ ನೋಡಿದಿರಲ್ಲ. ಯಾವುದರಲ್ಲಿಯೂ ತೆಗೆದುಹಾಕುವಂತಿಲ್ಲ. ಆದರೂ ಯಾಕೆ ಹೀಗಾಯಿತು? ಮುಹೂರ್ತ ಬರಲಿಲ್ಲ ಅಷ್ಟೆ. ನಾನು ಹೇಳಿದೆ ಕಡೆಗೆ ನಮ್ಮದೇ ಜಾತಿ ಗೀತಿ ನೋಡಿಕೊಂಡು ಒಂದು ಒಳ್ಳೆಯ ಕೆಲಸದಲ್ಲಿದ್ದವನನ್ನು ಲವ್ ಆದರೂ ಮಾಡು ಮಾರಾಯ್ತಿ. ನಾನು ಅಡ್ಡಿ ಮಾಡುವುದಿಲ್ಲ. ರಾಜಾರೋಷವಾಗಿ ಮದುವೆ ಮಾಡಿ ಕೊಡುತ್ತೇನೆ ಅಂತ'– ಇದು ನಗೆಯೆಂಬಂತೆ ಅಲ್ಲಿಗೆ ನಿಲ್ಲಿಸಿ ತಂದೆ ನಕ್ಕರು. ಆಗ ಒಡತಿಯೂ ನಕ್ಕಳು. ಆದರೆ ಸೌಗಂಧಿ ಅಳು ಬರುವಾಗ ನಗುವವಳು ಕೂಡ ಈ ಮಾತಿಗೆ ನಗದಾದಳು"[೨೯]. ಅಪ್ಪನಿಗೆ ಒಟ್ಟಿನಲ್ಲಿ ಮಗಳ ಮದುವೆಯಾಗಬೇಕು. ಅದು ಪ್ರೀತಿ ಮಾಡಿಯಾದರೂ ಆಗಬಹುದು. ಆದರೆ ಆತ ಒಂದೇ ಜಾತಿಯವನು, ಓದಿದವನು, ಉದ್ಯೋಗದಲ್ಲಿರುವವನೇ ಆಗಬೇಕು. ಅಂತಹವನಾದರೇ ಮಾತ್ರ ಮದುವೆ. ಇದನ್ನ ಕೇಳಿ ಆಕೆಯ ಮನಸ್ಸಿಗೆ ಬೇಸರವಾಗುತ್ತದೆ. ಆ ಮಾತುಗಳು ಅಪ್ಪನಿಗೂ ಮನೆಯೊಡತಿಗೆ ತಮಾಷೆ ಎಂದು ಅನಿಸಿದರೆ ಈಕೆಯ ಮನಸ್ಸಿಗೆ ದು:ಖವಾಗುತ್ತದೆ. ಹೀಗೆಲ್ಲಾ ಹೇಳಿ ಮನೆಯೊಡತಿಗೆ ಸೌಗಂಧಿಯ ಜವಾಬ್ದಾರಿಯನ್ನ ವಹಿಸಿ ಮನೆಗೆ ಬಂದ ಮೇಲೆ ತಾಯಿಯೊಡನೆ ತಂದೆ ಹೇಳಿದ್ದರು. "ಸೌಗಂಧಿಯ ಕುರಿತು ಯಾವ ಚಿಂತೆ ಬೇಡ. ಮನೆಯಾಕೆ ಬಹಳ ಒಳ್ಳೆಯ ಹೆಂಗಸು ವಿಧವೆ"... ಎಂದಾಗ ಅವಳಿಗೆ ಗಂಡನಿಲ್ಲದಿರುವುದು, ಒಬ್ಬಂಟಿ ಮಗಳು ಅವರ ಮನೆಯಲ್ಲಿ ಬಾಡಿಗೆಗೆ ಇರಬೇಕಾದ ಸಂದರ್ಭದಲ್ಲಿ, ಒಂದು ಒಳ್ಳೆಯ ಅಂಶವೆಂತವೇ!"[೩೦] ಹೀಗೆ ತಂದೆ ತಾಯಿಗೆ ಬಾಡಿಗೆ ಮನೆಯ ಬಗ್ಗೆ, ಒಡತಿಯ ಬಗ್ಗೆ ವಿವರಿಸುತ್ತಿದ್ದರು.

ಅಂತು ಸೌಗಂಧಿ ಅಂದುಕೊಂಡಂತೆ ಬೇರೆ ಊರಿಗೆ ಬರುತ್ತಾಳೆ. ಬರುವಾಗ ಕೂಡ ಅಪ್ಪ ಬಸ್ಸಿನವರೆಗೆ ಬಂದು ಬಿಟ್ಟು ಕಂಡಕ್ಟರೊಂದಿಗೆ ತನ್ನ ಮಗಳ ಪಕ್ಕದಲ್ಲಿ ಹೆಂಗಸನ್ನೇ ಕೂರಿಸುವಂತೆ ಹೇಳುತ್ತಾರೆ. ಹೀಗೆ ಸೌಗಂಧಿ ಇನ್ನು ತಾನು ಸ್ವತಂತ್ರಳಾಗಿ ಬದುಕಬಹುದೆಂದು ಅಂದುಕೊಂಡು ಬಾಡಿಗೆ ಮನೆಗೆ

ಬರುತ್ತಾಳೆ. ಆದರೆ ಮನೆಯೊಡತಿ ಬಂದು ರಾತ್ರಿ ಮಲಗಲು ಅಡುಗೆಯವಳು ಬರುತ್ತಾಳೆ ಎಂದು ಹೇಳುತ್ತಾಳೆ. ಅದಕ್ಕೆ ಸೌಗಂಧಿ 'ಬೇಡ' ಎಂಬುದಾಗಿ ಮೊದಲ ಬಾರಿಗೆ ಎಂಬಂತೆ ಪ್ರತಿರೋಧಿಸುತ್ತಾಳೆ. ಆಗ ಆಕೆ ಹಾಗಾದರೆ ನಾನೇ ಬರುತ್ತೇನೆ ಎಂದು ಹೇಳುತ್ತಾಳೆ. ಆಗ ಕೂಡ ಸೌಗಂಧಿ ವಿರೋಧಿಸುತ್ತಾಳೆ. ನನಗೆ ಏನೂ ಭಯವಿಲ್ಲ ಎಂದು ಹೇಳುತ್ತಾಳೆ. ಹೀಗೆ ಸೌಗಂಧಿ ಕೊನೆಗೆ ತನ್ನ ಮುಗ್ಧತೆಯ ಮುಖವಾಡವನ್ನ ಬದಲಿಸಿಕೊಳ್ಳಬೇಕೆಂದು ಬಯಸುತ್ತಾಳೆ. ಇಲ್ಲಿ ಆಕೆಗೆ ಮನೆಯೊಡತಿಯ ಮೇಲೆ ಸಿಟ್ಟು ಬರುತ್ತದೆ. ಆಕೆ ತನ್ನ ಸ್ವಾತಂತ್ರ್ಯವನ್ನ ಕಸಿಯುತ್ತಿದ್ದಾಳೆ ಎಂದೆನಿಸುತ್ತದೆ. "ಮನೆಯೊಡತಿ ತಂದಿಟ್ಟ ತಿಂಡಿ ಮಾತ್ರ! ತಿಂಡಿ ತಿನ್ನುವಾಗ, ಈ ಹೆಂಗಸಿನ ಪ್ರೀತಿಯನ್ನು ತಾನು ಹೇಗೋ ಅರ್ಥ ಮಾಡಿಕೊಳ್ಳುತ್ತಿದ್ದೆನಲ್ಲ. ತನ್ನ ಯೋಚನೆಗಳೆಲ್ಲ ಸರಿಯಿಲ್ಲ... ಅಂತನಿಸುತ್ತದೆ. ಆದರೆ ಸದ್ಯಕ್ಕೆ ಅಂತಹ ಯೋಚನಾ ರೀತಿಯೇ ತನಗೆ ಸುಖ ಕೊಡುತ್ತದೆ. ಎಲ್ಲರನ್ನೂ ದೂರೀಕರಿಸಿ ಒಬ್ಬಂಟಿಯಾಗಿ ತನ್ನನ್ನು ತಾನು ಕಂಡುಕೊಳ್ಳಲು ಅನುವು ಮಾಡಿಕೊಡುತ್ತದೆ"[೩೦]. ಇಲ್ಲಿ ಸೌಗಂಧಿಗೆ ಮನೆಯೊಡತಿಯ ಬಗ್ಗೆ ಒಂದು ಸಲಕ್ಕೆ ಬೇಸರವಾದರೂ ಕೂಡ ಆಕೆಯ ಪ್ರೀತಿಗೆ ಕರಗುತ್ತಾಳೆ.

ಹೀಗೆ ದಿನ ಕಳೆಯುತ್ತಿತ್ತು. "ಬಾಗಿಲು ಶಬ್ದವಾಯಿತೆಂದು ತೆರೆದರೆ ಒಂದೋ ಮನೆಯೊಡತಿ, ಇಲ್ಲ ಅವಳ ಅಡುಗೆ ಹೆಂಗಸು, ಇಲ್ಲ ಎದುರೇ ಇರುವ ಹಾಲಂಗಡಿಯವ– ಕೂಪನ್ನು ಕೊಡಲು ಬರುವ, ಕೂಪನ್ನು ಇಟ್ಟು ಮುಖ ಕೂಡ ನೋಡದೆ ಹೊರಟು ಹೋಗುವ ಸಂಭಾವಿತ ಮತ್ತೆ? ಮತ್ತೆ ಯಾರಿಲ್ಲ?"[೩೧] ಇಲ್ಲೆಲ್ಲಾ ಆಕೆಗೆ ಯಾರಾದರೂ ಬರಲಿ ಎಂಬ ಆಸೆ. ತನ್ನ ಮನಸ್ಸಿನಲ್ಲಾಗುವ ಲೈಂಗಿಕ ಬಯಕೆಯನ್ನ ಈಡೇರಿಸಿಕೊಳ್ಳುವ ಇಚ್ಛೆ. ಆದರೆ ಹಾಗೇನೂ ನಡೆಯುವುದಿಲ್ಲ ಎಂಬ ಬೇಸರ. ಇಷ್ಟೆಲ್ಲ ಬಯಕೆಗಳು, ಆಸೆಗಳು ಮನಸ್ಸಲ್ಲಿದರೂ ಕೂಡ ಆಕೆಗೆ ಯಾರನ್ನೂ ಪ್ರೀತಿಸಲು ಸಾಧ್ಯವಾಗಿಲ್ಲ. ಯಾಕಿರಬಹುದು? ಎಂದು ಯೋಚಿಸುತ್ತಾಳೆ. ಅದಕ್ಕೆ ಆಕೆಯಲ್ಲಿ ಉತ್ತರವಿಲ್ಲ.

"ಅಂದು ಮನೆಯೊಡತಿ ಬಂದವಳು 'ಏನಾದರೂ ಅಂಥದ್ದು ಆದರೆ ಗಟ್ಟಿಯಾಗಿ ಬೊಬ್ಬೆ ಹಾಕು ಎಂದಿದ್ದಳು. ಏನಾದರೂ ಅಂಥದ್ದು ಅಂದರೆ ಏನು? ಕಳ್ಳರು ಬಂದರೇ? ಗಂಡಸರು ಬಾಗಿಲು ತಟ್ಟಿದರೆ! ಕೂಗಿಕೊಂಡೇನೇ ನಾನು! ಸೌಗಂಧಿಗೆ ಉತ್ತರ ಸಿಗಲಿಲ್ಲ. ಮೇಲೂ ಮಾಡು ದಿಟ್ಟಿಸಿದಳು. ಕರಿಮುಖದ ಕಳ್ಳನೊಬ್ಬ ಇಳಿದು ಬರುತ್ತಿದ್ದಾನೆ ಎಂದು ಊಹಿಸಿಕೊಂಡಳು. ಕೂಗಿಕೊಳ್ಳಬೇಕು ಎಂದುಕೊಂಡವಳು 'ಏನು, ಏನನ್ನು ಕದಿಯಲು ಬಂದಿದ್ದೀ? ಎಂದು ನೇರವಾಗಿ ಅವನ ಕಣ್ಣುಗಳನ್ನೇ ನೋಡುತ್ತ ಕೇಳಿಬಿಟ್ಟಳು"[೩೨] ಇಲ್ಲೆಲ್ಲಾ ಆಕೆ ಆ ರೀತಿ ಆಗಲಿ ಎಂದು ಕನಸು ಕಾಣುತ್ತಿರುತ್ತಾಳೆ. ಆಗ ಮನೆಯೊಡತಿಯ ದನಿ ಕೇಳಿಸುತ್ತದೆ.

ಹಾಗೇ ಹೋಗಿ ಬಾಗಿಲು ತೆರೆಯುತ್ತಾಳೆ. "ಒಳಗೆ ಬಂದ ಮನೆಯೊಡತಿ ಅದೂ ಇದೂ ಮಾತಾಡುತ್ತಾ ಮೇಲೆಲ್ಲ ಕಣ್ಣುಹಾಯಿಸಿ 'ಈ ಮಾಡಿಗೊಂದು ಮುಚ್ಚಿಗೆ ಹಾಕಿಸಬೇಕು ಅಂತ ಬಹಳ ಇತ್ತು. ಆಗಲೇ ಇಲ್ಲ. ಈಗೆಲ್ಲ ಎಷ್ಟು ದುಬಾರಿ! ಯಾವುದಾದರೂ ಒಂದು ಕುಟುಂಬ ಬಾಡಿಗೆಗೆ ಬಂದಿದ್ದರೆ ಸರಿ ಹೋಗುತ್ತಿತ್ತು. ನೀನಿದ್ದಿ, ಒಬ್ಬಂಟಿ. ರಾತ್ರಿ ಯಾರಾದರೂ ಸೀದ ಇಳಿದು ಕೆಳಗೆ ಬರಬಹುದು, ಅಂತಹ ಮಾಡು"[೩೩]. ಇಲ್ಲಿ ಮಾಡು ಸರಿಯಿಲ್ಲದಿದ್ದುದ್ದು ಮನೆಯೊಡತಿಗೆ ಭಯ. ಆದರೆ ಸೌಗಂಧಿಗೆ ಭಯವಿಲ್ಲ. ಆಕೆಯ ಮನದಾಳದ ಕನಸುಗಳು ಹಾಗಾದರೂ ನನಸಾಗಲಿ ಎಂಬ ಬಯಕೆ. ಹಾಗಾಗಿ ಆಕೆ ರಿಪೇರಿ ಮಾಡೋದು ಬೇಡ. ಹೀಗೆ ಇರಲಿ ಎಂದು ನಿಧಾನಕ್ಕೆ ಹೇಳುತ್ತಾಳೆ.

ಆಕೆ ಒಬ್ಬಳೆ ಇದ್ದಾಗ ತನ್ನ ಮನದೊಳಗಿದ್ದ ಎಲ್ಲಾ ಬಯಕೆಗಳು ಪುಟಿದೇಳುತ್ತವೆ. ಆಕೆಗೆ ಸ್ವಚ್ಛಂದವಾಗಿ ಬದುಕಬೇಕೆಂಬ ಆಸೆಯಾಗುತ್ತದೆ. ಹಾಗಾಗಿ ಆಕೆ "ಕಡೆಗೊಂದು ಪಕ್ಷ ಕಳ್ಳನಾದರೂ ಬಂದಿದ್ದರೆ!"[೩೪]... ಎಂದು ಆಸೆಪಡುತ್ತಾಳೆ. ಆಕೆಯ ಸಹೋದ್ಯೋಗಿ ಅಂಜಲಿ "ಮದುವೆಯೆಂಬುದು ಅನಿವಾರ್ಯವಲ್ಲ ಸೌಗಂಧಿ"[೩೫] ಎಂದು ಹೇಳಿದಾಗ ಹೌದು ಗಂಡಿಲ್ಲದೆ ಬದುಕಬಹುದು ಎಂದು ಯೋಚಿಸುತ್ತಾಳೆ. ಅದು ಕ್ಷಣಿಕ ಮಾತ್ರ ಮತ್ತೆ ಸೋಲುತ್ತಾಳೆ. ತನ್ನ ಮನಸ್ಸಿಚ್ಛೆಯನ್ನ ಹೇಳಿಕೊಳ್ಳಲಾಗದೆ ಕನಸನ್ನ ಕಾಣುತ್ತಾಳೆ. ಆಕೆಯ 'ಕನಸುಗಳಲ್ಲಿ ಹಾಲಿನವನೂ ಹಣಕುತ್ತಾನೆ. ಸಂಭಾವಿತನ ಬಿಟ್ಟು ಗೊತ್ತೇ? ಮತ್ತೆ ಎಲ್ಲೋ ಕಂಡ ಆ ಕಂಡಕ್ಟರನೂ, ನನ್ನ ಪಕ್ಕದಲ್ಲಿ ಕುಳಿತುಕೊಳ್ಳದೆ ಹೋದ ಕ್ರಾಪಿನವನೂ....... ಮತ್ತೆ ಯಾರು ಯಾರೆಲ್ಲ; ಹೇಗೆಲ್ಲ ವಿವರಿಸಲಿ.....? ಆಫೀಸಿನ ಕೆಲ ಕಣ್ಣುಗಳು....... ಹೀಗೆ ಕನಸುಗಳನ್ನ ಹೇಳುತ್ತಾ ಹೋದ ಹಾಗೇ ಆಸೆಗಳು ಹೆಚ್ಚುತ್ತವೆ. 'ಬೆಳಿಗ್ಗೆ ಹೋಗುವಾಗ ದಪ್ಪ ಕೈಮಗ್ಗದ ಸೀರೆಯನ್ನು ಬೇಕೆಂದೇ ಕೋಣೆಯೊಳಗಿನ ನೇಲೆಯ ಮೇಲೆ ಹರವುವವಳು. ಅಡಗಿಕೊಳ್ಳುವವರಿಗೊಂದು ಜಾಗ ಕಲ್ಪಿಸುವಂತೆ ಮತ್ತು ತಾನು ಹಾಗೆ ಮಾಡುತ್ತಿರುವುದು ತನಗೂ ಗೋಪ್ಯದ ವಿಷಯವೆಂಬ ಗಪ್‌ಚಿಪ್ಪಿನಲ್ಲಿ. ಮರ್ಯಾದಸ್ತ ಮನೆಯವಳು ತಾನು ಮರ್ಯಾದೆ ಬಿಡುವ ತಾಕತ್ತಿಲ್ಲದವಳು. ಯಾರಾದರೂ ತೆಗೆಯಬೇಕಷ್ಟೆ. ತನಗೀಗ ಅನುಭವ ಬೇಕು. ಆವರಣದ ಕಾಪಟ್ಯ ಕಳೆಯಬೇಕು. ಅನಾವರಣಗೊಳ್ಳಬೇಕು ಹೇಗೆಂದರೆ ಯಾರೂ ತನ್ನ ಬಗ್ಗೆ ಕೆಟ್ಟದೆಣಿಸದಂತೆ. ಆದರೆ 'ಹೋ..... ನೋಡಿ ನಿಮ್ಮೆದುರೇ ಬೀದಿಯಲ್ಲಿ ಸೌಗಂಧಿ ಎಂಬ ಹೆಣ್ಣೊಬ್ಬಳು ಹೋಗುತ್ತಿದ್ದಾಳೆ. ಕೂಡಿಕೊಳ್ಳುವ ತಾಕತ್ತುಂಟೇ ಯಾರಿಗಾದರೂ?... ಎಂದು ಕೂಗಿ ಕೇಳುವಂತಿಲ್ಲವಲ್ಲ. ಕಾಶಿಯಂತಹ ಊರಿನಲ್ಲಿ ಕೂಡ ಘಾಟಿನಲ್ಲಿ ಹೆಣ್ಣಿನ ಮಾರಾಟ ಆಗಿರಬಹುದು. ಆದರೆ ಹೆಣ್ಣಿನ ಮಾನ ಮಾತ್ರದ ಹರಾಜು,ಆಗುವುದುಂಟೇ?..... ಕೇಳಿದವರು ತಟಕ್ಕನೆ ಹೇಳಿಯಾರು ಹೀಗೆಲ್ಲ ಅಪೇಕ್ಷಿಸುವವರೇ ಇಲ್ಲ– ಎಲ್ಲಿಯೂ. ಅದೂ ಮರ್ಯಾದಸ್ತ ಕುಟುಂಬದಲ್ಲಿ! ಎಂದು.

..ಹೀಗೆ ಸೌಗಂಧಿ ಮನಸ್ಸಿನ ತೀರ ಒಳಕೋಣೆಗಳಲ್ಲಿ ಮಾತಾಡುತ್ತಾ ತಿರುಗುವಳು"[೩೭], ಅವುಗಳನ್ನು ಈಡೇರಿಸಿಕೊಳ್ಳುವ ಮನಸ್ಸಾಗುತ್ತದೆ. ಆದರೆ ಸಮಾಜಕ್ಕೆ ಹೆದರುತ್ತಾಳೆ, ಲೈಂಗಿಕ ಬಯಕೆಯನ್ನು ತೀರಿಸಿಕೊಳ್ಳುವ ಯೋಚನೆ ಮಾಡಿದ ಸೌಗಂಧಿ ಆಸೆಯನ್ನ ಕೈಬಿಡುತ್ತಾಳೆ. ಸಂಪ್ರದಾಯವನ್ನು ಮೀರುವ ಪ್ರಯತ್ನ ಮಾಡಿದರೂ ಕೂಡ ಕೊನೆಗೆ ಸೋಲನ್ನು ಒಪ್ಪಿಕೊಳ್ಳುವ ಮೂಲಕ ತನ್ನ ಅಸಹಾಯಕತೆಯನ್ನ ವ್ಯಕ್ತಪಡಿಸುತ್ತಾಳೆ.

"ತನಗೀಗ ಅನುಭವಬೇಕು. ಆವರಣದ ಕಾಪಟ್ಯ ಕಳೆಯಬೇಕು, ಅನಾವರಣಗೊಳ್ಳಬೇಕು"[೩೮]. ಎಂಬ ಆಕೆಯ ಮಾತುಗಳು, ಆಕೆಗೆ ಅನುಭವ ಪಡೆಯುವುದಕ್ಕಾಗಿ ಒಬ್ಬ ಗಂಡಸಿನ ಅಗತ್ಯ ಇದೆ. ಆದರೆ ಅದನ್ನು ಬಹಿರಂಗ ಪಡಿಸುವ ಧೈರ್ಯ, ವಿಶ್ವಾಸ ಅವಳಿಗಿಲ್ಲ. ಹಾಗಾಗಿ ಬಾಗಿಲಿನ ಶಬ್ಧಕ್ಕಾಗಿ ಕಾಯುತ್ತಾಳೆ. "ಯಾರೋ ಬಾಗಿಲು ತಟ್ಟಿದ ಸದ್ದು, ಸೌಗಂಧಿಗೆ ಎಚ್ಚರವಾಗಿ ಕುಳಿತಳು, ಆ ಸದ್ದಿಗಾಗಿ ದಿನವಿಡೀ ಕಾದಿದ್ದಳಲ್ಲವೇ?

ಅಂತೂ ತನ್ನ ಮನೆಯ ಬಾಗಿಲೂ ಮುಂಜಾವದ ಮಂಜಿನಲ್ಲಿ ಯಾರದೋ ಬರ ತಿಳಿಸುವಂತಾಯಿತು. ಸೌಗಂಧಿ, ಯುಗ ಯುಗದಿಂದ ಹಸಿದಂತೆ ಆ ಸದ್ದನ್ನು ಆಲಿಸುವ ಆಸೆಯಿಂದ ಮತ್ತೆ ಮಲಗಿದಳು. ಸದ್ದು ಜೋರಾಗುತ್ತಾ ಬಂತು. ಮೆಲ್ಲನೆ ಅವಳ ಹೆಸರನ್ನು ಕರೆದಂತೆ.......

ಮತ್ತೆ ಎದ್ದು ಕುಳಿತಳು ಸೌಗಂಧಿ, ಯಾರಿರಬಹುದು?.... ಕಂಪನವನ್ನೇ ಮರೆತು ಯಂತ್ರದಂತಾಗಿದ್ದ ಎದೆಯಲ್ಲಿ ಈಗ ರಕ್ತ ಸಂಚಾರ ದ್ವಿಗುಣವಾದಂತೆ.... ಸೌಗಂಧಿ ತೊದಲಿದಳು. 'ಯಾರು'?

ಅಮಲಿನಲ್ಲಿದ್ದಂತೆ ಮುಂದೆ ಬಂದಳು,

ಎಲ್ಲಾ ಆಕಾಂಕ್ಷೆಗಳನ್ನು ಒಟ್ಟುಗೂಡಿಸಿ ಮೃದುವಾಗಿ ಬಾಗಿಲು ತೆರೆದಳು

ಅಲ್ಲಿ

ತಂದೆ ನಿಂತಿದ್ದರು. ಹಿಂದೆ ತಾಯಿ ನಿಂತಿದ್ದಳು!"[೩೯]

ಅಂತು ಕೊನೆಗೂ ಆಕೆ ಸ್ವಚ್ಛಂದವಾಗಿ ಬದುಕಬೇಕೆಂಬ ಆಸೆ ಈಡೇರದೇ ಹೋಗುತ್ತದೆ. ಆಕೆಯ ಭಾವನೆಗಳು ಆಕೆಯೊಂದಿಗೆ ಕಮರಿ ಹೋಗುತ್ತವೆ.

ಸಂಪ್ರದಾಯವಾದಿ ಮನೆತನದಿಂದ ಬಂದ ಹೆಣ್ಣೊಬ್ಬಳು ತನ್ನ ಮುಕ್ತ ಲೈಂಗಿಕತೆಯ ಅಪೇಕ್ಷೆಯನ್ನು ಈಡೇರಿಸಿಕೊಳ್ಳಲಾಗದ ವಾಸ್ತವ ಈ ಕತೆಯ ವಸ್ತು. ಇಲ್ಲಿ ಗಮನಿಸಬೇಕಾದುದು ಹೆಣ್ಣಾಗಿ, ಸೌಗಂಧಿ ತನ್ನ ಅಪೇಕ್ಷೆಯನ್ನು ಅದುಮಿಟ್ಟುಕೊಳ್ಳಬೇಕಾಗಿತ್ತು. ನಿರ್ಬಂಧ, ಕಟ್ಟು ಪಾಡುಗಳು ಮಾನಸಿಕ ಗಡಿದಾಟಲಾರದು. ಈ ದಾಟಲಾಗದಿರುವಿಕೆ ಆಕೆಯ ಮಿತಿ. ಇಂತಹದೊಂದು ಮಿತಿಯನ್ನು ಹೆಣ್ಣಿಗೆ ಹೇರಿರುವುದೇ ಪುರುಷ ಪ್ರಧಾನತೆಯ ಮರ್ಮ. ಕೊನೆಗೂ ಗೆಲ್ಲುವುದು ಹೆಣ್ಣಿನ ಸಹಜ ಹೆಣ್ತನದ ಬಯಕೆಗಳಲ್ಲಿ ಮರ್ಯಾದೆಯ ಚೌಕಟ್ಟನ್ನು ಹೇರಿರುವ ಪುರುಷ ನಿರ್ಮಿತ ಕಟ್ಟುಪಾಡು. ಮೀರಬೇಕಾದಲ್ಲಿ ಮೀರಲಾರದೆ, ಆ ಹಪಹಪಿಯನ್ನು ತನ್ನೊಳಗೇ ಅನುಭವಿಸುತ್ತಾ, ಹೊರಗೆ ತೋರಿಸಿ ಕೊಳ್ಳಲಾಗದೇ ಇರುವ ಸ್ಥಿತಿ ಕತೆಗೆ ಕೈಗನ್ನಡಿ. ಮೀರಬೇಕಾದ ತುಡಿತವಿದ್ದು ಮೀರಲಾಗದ ಅಸಹಾಯಕತೆ ಇಲ್ಲಿನ ಕೇಂದ್ರ ವಸ್ತು. 

'ಚಂದಲೆ' ಕತೆಯಲ್ಲಿ ಸಂಪ್ರದಾಯಸ್ಥ ಕುಟುಂಬಕ್ಕೆ ಸೇರಿದ ಬೀನಾ ಮತ್ತು ಚಿಕ್ಕ ವಯಸ್ಸಿನಲ್ಲಿಯೇ ವೇಶ್ಯಾವೃತ್ತಿಯನ್ನು ನಡೆಸುತ್ತಿದ್ದ ಚಂದಲೆಯ ಬದುಕಿನ ಚಿತ್ರಣವನ್ನ ಮುಖಾಮುಖಿಯಾಗಿಸಿದ್ದಾರೆ. ಇಲ್ಲಿ ಬೀನಾಳಿಗೆ ಸ್ವಚ್ಛಂದವಾಗಿ ಬದುಕಲು ಆಸೆ. ಆದರೆ ಸಂಪ್ರದಾಯವನ್ನೇ ಬಿಟ್ಟು ಬದುಕುವುದು ಸಾಧ್ಯವಾಗುವುದಿಲ್ಲ. ಇಲ್ಲಿ ಚಿಕ್ಕವಳಾದ ಬೀನಾ ರಮಿಯನ್ನ ಕೂಗುತ್ತಾ ಬರುತ್ತಾಳೆ. ರಮಿ ಬೀನಾಳನ್ನ ತೋಟಕ್ಕೆ ಕರೆಯುತ್ತಾಳೆ. ಹತ್ತಿರ ಬಂದು "ಏನು ಆಂಟಿ ಇಡೀ ದಿನ ತೋಟದಲ್ಲೇ ಇರುತ್ತೀರಪ್ಪ, ಬೇಸರ ಬರುವುದಿಲ್ಲ ನಿಮಗೆ?"[೪೦] ಎಂದು ಕೇಳುತ್ತಾಳೆ. ಅದಕ್ಕೆ ರಮಿ "ಇಡೀ ದಿನ ಆಚೀಚೆ ಮನೆಗೆ ತಿರುಗುತ್ತ ಇರುತ್ತೀಯಪ್ಪ ಬೇಸರ ಬರುವುದಿಲ್ಲ ನಿನಗೆ?"[೪೧] ಎಂದು ಕೇಳಿದಾಗ ಬೀನಾ ಕೊಟ್ಟ ಉತ್ತರ ರಮಿಗೆ ಕೇಳಿ ಮೈ ರೋಮಾಂಚನವಾಗುತ್ತದೆ. "ಓ.... ನಂಗದೇ ಇಷ್ಟ'– ಎಂದ ಹುಡುಗಿ ನಿಮಿಷ ಬಿಟ್ಟು ಹತ್ತಿರ ಬಂದು ಪಿಸುದನಿಯಲ್ಲಿ 'ಆಂಟಿ, ನನ್ನ ನಿಜವಾದ ಇಷ್ಟ ಕೇಳುತ್ತೀರ?...... ಸೂಳೆಯಂತಿರಬೇಕು ಆಂಟಿ. ಏನು ಮಜ ಆಗ ಅಲ್ಲ?...."[೪೨] ಎಂದು ಹೇಳಿ ತಕ್ಷಣ "ಯಾರಿಗೂ ಹೇಳಬೇಡಿ ಆಂಟಿ. ನನ್ನ ಕೊಂದು ಬಿಟ್ಟಾರು"[೪೩] ಎಂದು ಹೇಳುತ್ತಾಳೆ. ಅವಳನ್ನು ನೋಡಿದ ರಮಿಗೆ "ಎಷ್ಟು ಎಳೆಯ ಮುಖ! ಕಣ್ಣು ಮೂಗು ಕೆನ್ನೆ ತುಟಿ– ಮೊಗ್ಗು ಮೊಗ್ಗು. ಯಾವುದರಲ್ಲಿಯೂ ಯಾವ ಭಾವವೂ ಪೂರ್ಣವಾಗಿಲ್ಲ..... ಅಷ್ಟರಲ್ಲೇ ಈ ಆಸೆ!.... ಇಂತಹ ಆಸೆಗಳನ್ನು ಗುರುತಿಸುವ ಹೇಳುವ ಧೈರ್ಯ ಉಂಟಲ್ಲ ಈ ಹುಡುಗಿಗೆ!"[೪೪] ಎಂದು ಅನಿಸುತ್ತದೆ. ಹಾಗೇ ರಮಿ ನನಗೆ ಹೇಳಿದ್ದನ್ನ ಯಾರೊಂದಿಗೂ ಹೇಳಬೇಡ ಎಂದು ಹೇಳಿದಾಗ, ಬೀನಾ ಯಾಕೆ ಆಂಟಿ ನನಗೆ ಅನಿಸಿದ್ದನ್ನ ಹೇಳಿದ್ದೇನೆ ಅದು ತಪ್ಪಾ ಎಂದು ಕೇಳುತ್ತಾಳೆ. ಅದಕ್ಕೆ "ತಪ್ಪು ಸರಿ ಎನ್ನಲು ನಾನು ಯಾರು? ಒಂದು ರೀತಿಯಲ್ಲಿ ನಮಗನಿಸಿದ್ದನ್ನ ಮಾಡಲಿಕ್ಕೆ ಯಾರದೇನು ಅಡ್ಡಿ? ಆದರೆ ನೋಡು, ನಾವು

ಕಾಡಿನಲ್ಲಿರುವವರಲ್ಲ. ನಮ್ಮನ್ನು ನೋಡಿ ಕಲಿಯಲು ಬೆಳೆಯಲು ಸಮಾಜದ ಮಧ್ಯೆ ನಾವಿದ್ದೇವೆ ಎಂದಾಗ ಸ್ವಲ್ಪ ಜವಾಬ್ದಾರಿಯೂ ನಮಗಿದೆ ಅಂದ ಹಾಗಾಗಲಿಲ್ಲ? ಜವಾಬ್ದಾರಿ ಇದ್ದ ಮೇಲೆ...

ಅದೆಲ್ಲ ನನಗರ್ಥವಾಗುವುದಿಲ್ಲ. ನಂಗೆ ಯಾವ ಜವಾಬ್ದಾರಿಯೂ ಬೇಡ. ನೋಡಿ ನಾ ಬೇಕೆಂದ ಹಾಗೆ ಇರುವವಳೇ"[೬೫]. ಎಂದು ತನ್ನ ಆಸೆಯನ್ನ ರಮಿಯ ಮುಂದೆ ಹೇಳುತ್ತಾಳೆ. ಇಲ್ಲಿ ಬೀನಾಳಿಗೆ ಸ್ವತಂತ್ರವಾಗಿ, ಯಾವುದೇ ಜವಾಬ್ದಾರಿಗಳಿಲ್ಲದ ಜೀವನ ಆಕೆಗೆ ಇಷ್ಟ. ಆದರೆ ಅದನ್ನು ಎಲ್ಲರ ಮುಂದೆ ಬಹಿರಂಗಪಡಿಸುವ ಧೈರ್ಯ ಅವಳಲ್ಲಿಲ್ಲ. ಹಾಗಾಗಿ ತನ್ನ ತಾಯಿಯೊಂದಿಗೆ ಹೇಳದೇ ಮನಸ್ಸಿನ ಬಯಕೆಯನ್ನ ಪಕ್ಕದ ಮನೆ ಆಂಟಿಯೊಂದಿಗೆ ವ್ಯಕ್ತಪಡಿಸುತ್ತಾಳೆ. ರಮಿಗೆ ಬೀನಾಳ ಮಾತು ಕೇಳಿದ ಮೇಲಿನಿಂದ ತನ್ನ ಮಗನ ಮೇಲೆ ಜವಾಬ್ದಾರಿ ಹೆಚ್ಚಾಯಿತು. ಒಮ್ಮೆ ಮನೆಯಲ್ಲಿ ಮಗನೊಬ್ಬನನ್ನು ಬಿಟ್ಟು ಹೊರಗೆ ಹೋದ ರಮಿಗೆ ಬೀನಾಳನ್ನು ನೆನೆಸಿ ಜ್ವರ ಬರುತ್ತದೆ. ಹಾಗಾಗಿ ಬೇಗನೇ ಮನಗೆ ಬರುತ್ತಾಳೆ. ರಮಿಗೆ ತಾನು ಚಿಕ್ಕವಳಿದ್ದಾಗ ನೋಡಿದ ಚಂದಲೆಯ ಸ್ವಚ್ಛಂದ ಬದುಕು ಕಣ್ಣ ಮುಂದೆ ಬರುತ್ತದೆ. "ಚಂದಲೆ ಕಣ್ಣ ಮುಂದೆ ಬಂದು ಬಳೆ ಕುಣಿಸಿ ಹೋಗುತ್ತಿದ್ದಾಳೆ. ಚಂದಲೆಯ ಕಪ್ಪು ದುಡುಮಿ ಅಮ್ಮ ಆ ಬಾಗಿಲು ಬಳಿ ನಿಂತಿದ್ದಾಳೆ. ತಾನೆಷ್ಟು ಸಲ ಉಪ್ಪರಿಗೆ ಕಿಟಕಿಯಿಂದ ಅವರನ್ನು ನೋಡುತ್ತಿದ್ದೆ. ಚಂದಲೆ ಸಂಜೆ ಹೊತ್ತಿಗೆ ಮನೆಯ ಮುಂದೆ ಸುಣ್ಣ ಬಳಿದಂತೆ ಪೌಡರು ಹಚ್ಚಿಕೊಂಡು ನಿಂತಿರುತ್ತಿದ್ದಳು. ಏಳು ಗಂಟೆಗೆ ಸರಿಯಾಗಿ ಆ ಹುರಿ ಮೀಸೆಯವ ಬರುತ್ತಿದ್ದ. ಬಂದೊಡನೆ ಅವನಿಗೆ ಅಂಟಿಕೊಂಡೇ ಅವಳೂ ಅವನೊಡನೆ ಒಳಗೆ ಹೋಗುತ್ತಿದ್ದಳು. ಅವಳ ಕಪ್ಪು ಅಮ್ಮ ಹೊರಗೆ ಬಂದು ಎಲೆ ಅಡಿಕೆ ಚೀಲ ಬಿಚ್ಚುತ್ತಿದ್ದಳು. ಎಷ್ಟೋ ಸಲ ತನ್ನನ್ನು ಕಂಡು ಕಣ್ಣು ಹೊಡೆದದ್ದೂ ಉಂಟು. ಎಷ್ಟೋ ಸಲ ಅಮ್ಮ ಬಂದು ತನ್ನ ಜುಟ್ಟು ಹಿಡಿದು ಎಳೆದುಕೊಂಡು ಬೆನ್ನಿನ ಮೇಲೆ ಗುಡುಂ ಗುಡುಂ ಗುದ್ದುತ್ತ ಒಳಗೆ ಎಳೆದುಕೊಂಡು ಹೋದದ್ದು ಉಂಟು, ನೀನು ಆಗು ಹಾಗೇ ಎಂತ ಶಪಿಸುತ್ತ.

ಹುರಿ ಮೀಸೆಯವನ ನಂತರ ಬಿಳಿ ಚೂಪು ಮುಖದವ. ಅವನ ನಂತರ ಇನ್ನೊಬ್ಬ, ಚಂದಲೆ ಕಪ್ಪು ಅಮ್ಮನ ಮಗಳಾದರೂ ಕೆಂಪು ಬಿಳಿ ಹೆಂಗಸು. ಯಾವಾಗ ಕಂಡರೂ ಕುಲುಕುಲು. ಕೆಂಪು ಬಿಳಿಯ ಹೆಂಗಸಾದರೂ ಮುಖದಲ್ಲಿ ಎಳ್ಳು ಭತ್ತದಷ್ಟು ಲಕ್ಷಣವಿಲ್ಲ ಎಂತ ಮೂಗು ಮುರಿಯುತ್ತಿದ್ದಳು ಸಣ್ಣಿ. ಒಮ್ಮೆ ಚಂದಲೆ ತನ್ನನ್ನು ನೋಡಿ 'ಬತ್ತಿಯ ನಮ್ಮನಿಗೆ?' ಎಂದಿದ್ದಳು. ಬೆವೆತ್ತಿದ್ದೆ ತಾನು. ಅಮ್ಮ ಆ ಕಿಟಕಿಯನ್ನೇ ಮುಚಿಸಿ ಬಿಟ್ಟಿದ್ದಳು"[೬೬]. ಹಾಗೇ ಚಂದಲೆಯ ಬದುಕನ್ನ ಕಂಡ ರಮಿಗೆ ಬೀನಾಳ ಸ್ವಚ್ಛಂದವಾಗಿ ಬದುಕಬೇಕೆಂಬ ಬಯಕೆಯನ್ನ ಕಂಡಾಗ ಮನಸ್ಸಿಗೆ ಬೇಸರವಾಗುತ್ತದೆ. ಬೀನಾಳಿಗೆ ತಾನು ಸ್ವತಂತ್ರವಾಗಿ

ಬದುಕಬೇಕೆಂಬ ಆಸೆ ಕೊನೆಗೆ ಕಮರಿ ಹೋಗುತ್ತದೆ. ಏಕೆಂದರೆ ಬೀನಾಳದ್ದು ಸಂಪ್ರದಾಯಸ್ಥ ಮನೆತನ. ಹಾಗಾಗಿ ಬೀನಾಳ ಎಲ್ಲಾ ಆಸೆಗಳಿಗೆ ತೆರೆಬಿದ್ದು ಕೊನೆಗೆ ಆಕೆ ಅಪ್ಪ ಅಮ್ಮ ನೋಡಿದ ಹುಡುಗನನ್ನು ನೋಡಿ ಮದುವೆಯಾಗಿ ಸಂಸಾರ ನಡೆಸುತ್ತಾಳೆ. ಈ ಕತೆಯಲ್ಲಿ ಚಂದಲೆ ಯಾವುದೋ ಕಾರಣಕ್ಕೆ ನೇಣುಹಾಕಿಕೊಂಡು ಸತ್ತು ಹೋಗುತ್ತಾಳೆ. ಆದರೆ ಬೀನಾ ತನ್ನೆಲ್ಲಾ ಬಯಕೆಗಳನ್ನ ಕಡೆಗಣಿಸಿ ಆಕೆ ತನ್ನ ಗಂಡ ಮಗುವಿನೊಂದಿಗೆ ಸಂಸಾರ ನಡೆಸುತ್ತಾಳೆ.

ಸಾಮಾಜಿಕ ಚೌಕಟ್ಟನ್ನು ಮೀರುವಿಕೆ ವಿಜಯದೊಂದಿಗೆ ಸರಿಸಮಾಪ್ತಿ ಹೊಂದದೆ, ಅದು ದುಃಖಾಂತ್ಯವಾಗುವುದು ಚಂದಲೆಯ ಬದುಕು ಕೊಡುವ ಸೂಕ್ಷ್ಮ ಉತ್ತರ. ಮುಕ್ತತೆಯ ಆಯ್ಕೆಯಲ್ಲಿ ಸುಖ ಅಂತ್ಯದವರೆಗೂ ಇಲ್ಲ, ಎನ್ನುವುದನ್ನು ಸೂಚ್ಯವಾಗಿ ಹೇಳುತ್ತಿದೆ. ಬೀನಾಳ ಬಯಕೆ ಗಾಢವಾದುದು. ಆದರೆ ಅದು ಪರ್ಯಾವಸನಗೊಳ್ಳುವುದು ಬೇರೊಂದು ನೆಲೆಯಲ್ಲಿ.

'ಪ್ರಶ್ನೆ' ಕತೆಯಲ್ಲಿ ಬರುವ ಭುವಿ, ತನ್ನ ಕಾಲೇಜಿಗೆ ಭಾಷಣ ಮಾಡಲು ಬಂದ ಐವತ್ತು ವರುಷ ದಾಟಿದ ಮಹಾಮೇಧಾವಿಯನ್ನ ಕಂಡು ಆತನೊಂದಿಗೆ ಒಂದು ರಾತ್ರಿ ಕಳೆಯಬೇಕೆಂದು ಆಸೆ ಪಡುತ್ತಾಳೆ. ಅದನ್ನ ಅನುವಿನೊಂದಿಗೆ ಹೇಳಿದಾಗ ಮೊದಲು ಆಕೆ ಅವಳ ಅನೈತಿಕ ಮನೋಸ್ಥಿತಿಯನ್ನ ವಿರೋಧಿಸಿದರೂ ಕೂಡ ನಂತರ ಅವಳನ್ನ ಪ್ರೇರೇಪಿಸುತ್ತಾಳೆ. ಸಭೆಯಲ್ಲಿ ಸಂವಾದದ ನಂತರ ಅದರ ಬಗ್ಗೆ ಪ್ರಶ್ನೆ ಕೇಳಲು ಹೇಳಿದಾಗ ಅನು ಈಕೆಯನ್ನ, ಈಕೆಯ ಆಸೆಯ ಬಗ್ಗೆ ಪ್ರಶ್ನೆ ಕೇಳುವಂತೆ ಉತ್ತೇಜಿಸುತ್ತಾಳೆ. ಕೊನೆಯ ಪ್ರಶ್ನೆಯಾಗಿ ಎತ್ತಿಕೊಳ್ಳುವ ವಿದ್ವಾಂಸ ತುಂಬಿದ ಸಭೆಯಲ್ಲಿ ಆ ಪ್ರಶ್ನೆ ಕೇಳಿದವರನ್ನು ಎದ್ದು ನಿಲ್ಲಲು ಹೇಳುತ್ತಾನೆ. ಆಗ ಭುವಿ ತುಂಬಾ ಹೆದರುತ್ತಾಳೆ. ಬರೆಯುವಾಗ ಇದ್ದ ಧೈರ್ಯ ಈಗ ಇರಲಿಲ್ಲ. ಯಾರೂ ನಿಲ್ಲದೇ ಇದ್ದಾಗ ತನ್ನನ್ನು ಬಂದು ಕಾಣಲು ಸೂಚಿಸುತ್ತಾನೆ. ಸಂವಾದ ಮುಗಿದ ಮೇಲೆ ಆತ ಹೊರಡಲುನುವಾದಾಗ ಅನು ಭುವಿಯನ್ನು ಆತನ ಬಳಿ ಹೋಗಲು ಹೇಳುತ್ತಾಳೆ. ಆದರೆ ಭುವಿಗೆ ತನ್ನ ತಂದೆ-ತಾಯಿಯ ನೆನಪಾಗಿ ಆಕೆ ಹೋಗಲು ಒಪ್ಪುವುದಿಲ್ಲ. ಆದರೆ ಅನು ಸಂಪ್ರದಾಯವನ್ನು ಲೆಕ್ಕಿಸದೆ ಆತನೊಂದಿಗೆ ಹೋಗುತ್ತಾಳೆ. ಇಲ್ಲಿ ಭುವಿ ಮೊದಲು ಅನೈತಿಕ ವಿಚಾರದತ್ತ ಮನಸ್ಸು ಮಾಡಿದರೂ ಕೂಡ ಹೋಗಲು ಧೈರ್ಯ ಸಾಲದೇ ಹಿಂಜರಿಯುತ್ತಾಳೆ. ಆಕೆ ಮನೆ ಮರ್ಯಾದೆ ಬಗ್ಗೆ ಯೋಚಿಸುತ್ತಾಳೆ. ಆದರೆ ಭುವಿಯನ್ನ ಪ್ರಶ್ನೆ ಕೇಳಲು ಪ್ರೇರೇಪಿಸಿದ ಅನು ಕೊನೆಗೆ ಆತನೊಂದಿಗೆ ಧೈರ್ಯದಿಂದ ಕಾರು ಹತ್ತಿ ಹೋಗುತ್ತಾಳೆ. ಆಕೆ ತನ್ನ ಮನದ ಬಯಕೆಯನ್ನ ಈಡೇರಿಸಿಕೊಳ್ಳುವುದರಲ್ಲಿ ಗೆಲ್ಲುತ್ತಾಳೆ. ಇಲ್ಲಿ ಅನು

ಸಮಾಜಕ್ಕೆ ಹೆದರದೇ ಧೈರ್ಯವಂತೆ ಹೆಣ್ಣಾಗಿ ಕಂಡುಬರುತ್ತಾಳೆ. ಆಕೆಗೆ ಜೀವನದಲ್ಲಿ ಮುಂದ ಬರಬಹುದಾದ ಯಾವುದೇ 'ಪ್ರಶ್ನೆ'ಗಳು ಆ ಕ್ಷಣದಲ್ಲಿ ಎದುರಾಗುವುದಿಲ್ಲ.

'ಗೂಡಿನೊಳಗೆ ಒಂದು ಹಕ್ಕಿ' ಈ ಕತೆಯಲ್ಲಿ ಮಾಲತಿಗೆ ಸ್ವಚ್ಛಂದವಾಗಿ ಬದುಕಬೇಕೆಂಬ ಆಸೆ. ಹಾಗಾಗಿ ಆಕೆಗೆ ಮನೆ ಬಂಧನದಂತೆ ಕಂಡು ಬರುತ್ತದೆ. ಗಂಡ ಮನೆಯಿಂದ ಹೊರಗೆ ಹೋಗುವಾಗ ಮನೆಯ ಬಾಗಿಲಿಗೆ ಬೀಗ ಹಾಕಿಕೊಂಡು ಹೋಗಲು ಹೇಳುತ್ತಾಳೆ. ಮೊದಲು ಗಂಡ ತಮಾಷೆಗೆಂದು ತಿಳಿದು ನಗುತ್ತಾನೆ. ಅದಕ್ಕೆ ಮಾಲತಿ "ಹೊರಗೆ ಬೀಗ ಹಾಕಿಸಿಕೊಂಡು ಒಳಗೆ ಒಬ್ಬಳೇ ಇರಬೇಕಂತ ಆಸೆ"[೪೭] ಎಂದಳು. ನಂತರ ಗಂಡ-ಹೆಂಡತಿಯರ ಮಧ್ಯೆ ಅನೇಕ ಪ್ರಶೋತ್ತರ ರೀತಿಯಲ್ಲಿ ಸಂಭಾಷಣೆಗಳು ನಡೆಯುತ್ತದೆ. ಗಂಡ ಬೀಗ ಹಾಕಿಕೊಂಡು ಹೋಗಲು ಒಪ್ಪಿದರೂ ಕೂಡ ಆತನಿಗೆ ಭಯವಿದೆ. ಎಲ್ಲಿಯಾದರೂ ಯಾರಾದರೂ ನೋಡಿದರೆ, ಕಿಟಕಿಯಿಂದ ನಿನ್ನನ್ನು ಕಂಡರೆ, ಎಂದೆಲ್ಲಾ ಪ್ರಶ್ನೆ ಹಾಕಿದರೆ ಅದಕ್ಕೆ ಆಕೆ ಇಲ್ಲ ಯಾರಿಗೂ ಗೊತ್ತಾಗದಂತೆ ಇರುತ್ತೇನೆ ಎಂದು ಹೇಳುತ್ತಾಳೆ. ಅದಕ್ಕೆ ಆತ "ಅದೇನು? ಯಾಕೆ ಹಾಗೆ ಇರಬೇಕೆನ್ನುತ್ತಿ?'

'ಸುಮ್ಮನೆ ಯಾವಾಗಲೂ ಒಂದೇ ತರಹ ಇದ್ದು ಬೇಜಾರು'

'ಹಾಗಾದರೆ ಒಂದು ದಿನ 'ಒಬ್ಬ ಗಂಡಸಿನೊಡನೆಯೇ ಇದ್ದು ಬೇಜಾರು'

ಎಂತ ಅಂದರೂ ಅಂದೆ ನೀನು...?"[೪೮] ಎಂದು ತಮಾಷೆಗೆ ಹೇಳಿ ನಗುತ್ತಾನೆ. ಅದಕ್ಕೆ ಆಕೆ "ಒಂದು ವೇಳೆ ಹಾಗೆಂದರೂ ಅದರಲ್ಲಿ ಯಾಕೆ ಆಶ್ಚರ್ಯ ಪಡಬೇಕು?"[೪೯] ನಂತರ ಪುನ: ಆತ ತಮಾಷೆಗೆ

"ನಿನ್ನೊಡನೆ ನಾನಾದ್ದಕ್ಕೆ ಬಾಳುತ್ತಿದ್ದೇನೆ'

'ಹೌದ! ಬಾಳಿ ಎಲ್ಲ ಆದ ಮೇಲೆ ಚಿನ್ನದ ಪದಕ ಕೊಡುತ್ತೇನೆ'.

'ಆದರೆ ಚಿನ್ನದ ಪದಕ ಕೊಡುವ ಮುಂಚೆಯೇ ನೀನು ಹೋಗಿಬಿಟ್ಟರೆ?

'ನಾನು ಕೊಡುವುದರೊಳಗೆ ನೀವೇ ಒಂದು ವೇಳೆ ಪೆಟ್ಟಿಗೆ ಕಟ್ಟಿದರೆ"[೫೦]- ಹೀಗೆ ಆಕೆ ಆತನೊಂದಿಗೆ ಪ್ರಶ್ನೆಗೆ, ಎದುರುತ್ತರ ಕೊಡುತ್ತಾ ಹೋಗುತ್ತಾಳೆ. ಇಲ್ಲಿ ಆತ ತಮಾಷೆಗೆ ಮಾತನಾಡಿದ್ದರೂ ಕೂಡ ಆಕೆಯ ಮಾತಿನಲ್ಲಿ ತಮಾಷೆಯ ಭಾವ ಕಂಡು ಬರುವುದಿಲ್ಲ. ಬದುಕಲು ಗಂಡನೇ ಬೇಕಾಗಿಲ್ಲ, ಎಂಬಂತಹ ಭಾವನೆಯಿಂದ ಮಾತನಾಡುತ್ತಾಳೆ. ಅಂದರೆ ಆಕೆಗೆ ಒಟ್ಟಿನಲ್ಲಿ ಸ್ವಾತಂತ್ರ್ಯಬೇಕು. ಆಕೆಗೆ ಸಂಸಾರ ಎಂಬ ಬಂಧನದಿಂದ ಬಿಡುಗಡೆ ಬೇಕಾಗಿತ್ತು. ಹಾಗಾಗಿ ಗಂಡನೊಂದಿಗೆ ಪುನ: ಬೀಗ ಹಾಕಲು ನೆನಪಿಸುತ್ತಾಳೆ. "ಯೋಚಿಸಿದ

ಅವ. 'ಸರಿ ಹಾಕುತ್ತೇನೆ. ಆದರೆ ಒಂದು ಶರ್ತ ನೀನು ಒಳಗಿದ್ದೀಯಂತ ಯಾರಿಗೂ ತಿಳಿಯಬಾರದು. ಒಂದು ಶಬ್ದ ಸಹ ಆಗಬಾರದು. ಅಕ್ಕಪಕ್ಕದವರಿಗೆ ಹೀಗೆ ಹೆಂಡತಿಯನ್ನು ಮನೆಯಲ್ಲಿ ಬೀಗ ಹಾಕಿಟ್ಟು ಹೋಗಿದ್ದಾನೆ ಎಂತ ತಿಳಿದರೆ ನನ್ನ ಮರ್ಯಾದೆ ಉಳಿಯಲಿಕ್ಕಿಲ್ಲ. ನಿನಗೆ ತಿಳಿಯಿತ್ತಲ್ಲ.....?

'ಆ ಹೆದರಿಕೆಯೇ ಬೇಡ ನಿಮಗೆ, ಆದರೂ ಸೊಸೈಟಿಗೆ ಎಷ್ಟು ಹೆದರುತ್ತೀರಿ ನೀವು!.

'ಸೊಸೈಟಿಗೆ ಹೆದರುವುದಲ್ಲವೇ. ನಾನು ಹೆದರುವುದು ನನಗೇ. ಸೊಸೈಟಿ ನನ್ನ ಬಗ್ಗೆ ಏನಾದರೂ ಹೇಳಿದರೆ ನನಗೆ ಸಹಿಸಲಿಕ್ಕಾಗುವುದಿಲ್ಲ"[೫೧] ಎನ್ನುತ್ತಾನೆ. ಇಲ್ಲಿ ಗಂಡನಾದವನು ಹೆಂಡತಿಯ ವಿಚಿತ್ರವಾದ ಆಸೆಗೆ ಕಾರಣವನ್ನು ತಿಳಿದುಕೊಳ್ಳಬೇಕಿತ್ತು. ಆದರೆ ಆತ ಕೇಳುವುದಿಲ್ಲ. ಕೇಳಬೇಕೆಂದು ಅನಿಸಿಲ್ಲ. ಹಾಗೇ ಗಂಡ ಮನೆಯಿಂದ ಹೋದ ತಕ್ಷಣ ಮಾಲತಿ ಕಿಟಕಿ ಬಾಗಿಲು ಹಾಕಿ, ಪರದೆಗಳನ್ನೆಲ್ಲಾ ಮುಚ್ಚಿ ಒಬ್ಬಳೇ ಎಂದು ಸಂತೋಷಪಟ್ಟಳು "ಪಕ್ಕದ ಮನೆ ಹರಿಣ ಉಲನು ಕಡ್ಡಿ ಹಿಡಿದು 'ಹೇಳಿ ಕೊಡ್ತೀರ'? ಎಂತ ಅಡಿಗೆ ಮನೆ ಬಾಗಿಲಲ್ಲೇ ರಾಗವೆಳೆಯುತ್ತ ಕೂಡುವಂತಿಲ್ಲ.

'ಮತ್ತೇ... ಸಕ್ಕರೆ ಕೊಡಬೇಕಂತೆ'– ಎಂತ ಎದುರು ಮನೆ ಅಜ್ಜಿ ಪುಳ್ಳಿ ಲೋಟ ಮುಂದೆ ಮಾಡಿ ಬರುವಂತಿಲ್ಲ. ಯಾರೂ ಬರುವಂತಿಲ್ಲ.

ಇವತ್ತು ತಾನು ಸ್ವತಂತ್ರಳು"[೫೨] ಎಂದು ನೆನೆಸಿ ತುಂಬಾ ಖುಷಿಯಿಂದ ಇದ್ದಳು. ತಾನು ಹೇಗೆ ಬೇಕಾದರೂ ಸ್ವತಂತ್ರ ವಾಗಿ ಇರಬಹುದು ಎಂದು ಯೋಚಿಸುತ್ತಾಳೆ. ಹಾಗೇ ಅವಳ ಮನಸ್ಸಲ್ಲಿದ್ದ ಅನೇಕ ಆಸೆಗಳನ್ನು ಪೂರೈಸಿಕೊಳ್ಳುವ ಆತುರದಲ್ಲಿದ್ದಾಳೆ. ಹಾಗಾಗಿ ಕೂಡಲೇ ಬಚ್ಚಲಿಗೆ ಹೋಗಿ ಬಾಗಿಲು ಹಾಕದೇ ಸ್ನಾನ ಮಾಡುತ್ತಾಳೆ. ಆಗ ಚಿಕ್ಕವಳಿದ್ದಾಗ ಅಮ್ಮ ಸ್ನಾನ ಮಾಡಿಸುತ್ತಿದ್ದದ್ದು ನೆನಪಾಗುತ್ತದೆ. ಅವಳಿಗೆ ಹಿಂದಿನ ನೆನಪುಗಳು ಮರುಕಳಿಸುತ್ತವೆ. ಆಕೆ ಕಾಲೇಜಲ್ಲಿ ಇದ್ದಾಗ ಹುಡುಗರಂತೆ ಶಿಳ್ಳೆ ಹೊಡೆಯುತ್ತಿದ್ದದ್ದು. ಹಾಗೇ ಒಮ್ಮೆ ಪ್ರಿನ್ಸಿಪಾಲರ ಕೈಗೆ ಸಿಕ್ಕಿ ಬಿದ್ದು ಅವರು ಕರೆದು ಬುದ್ಧಿವಾದ ಹೇಳಿದ್ದನ್ನು ಜ್ಞಾಪಿಸಿಕೊಳ್ಳುತ್ತಾಳೆ. ಪ್ರಿನ್ಸಿಪಾಲರು "ನೀನು ಹೆಣ್ಣು. ಅದರಲ್ಲಿಯೂ ಭಾರತದಲ್ಲಿ ಹುಟ್ಟಿದವಳು ಎಂತ ಪುನಃ ಪುನಃ ಹೇಳಿ ಹೀಕರಣೆ ಬರಿಸಿದರು.

ಹೆಣ್ಣೆಂದರೆ ಶಿಳ್ಳೆ ಹೊಡೆಯುವುದಕ್ಕೂ ದುರ್ಬಲಳು. ಅದಕ್ಕೂ ಗಂಡಿನ ಆಧಾರಬೇಕು ಎಂತ ಅವರ ಅರ್ಥವೆ?"[೫೩] ಅಂದರೆ ಇಲ್ಲೆಲ್ಲಾ ಮಾಲತಿಗೆ ಹೆಣ್ಣು ಕೂಡ ಗಂಡಿನಂತೆ ಬದುಕಬೇಕೆಂಬ ಇಚ್ಛೆ ಕಂಡು ಬರುತ್ತದೆ. ಹಾಗೇ ಮಾಲತಿ ಸ್ನಾನ ಮಾಡಿ ಮಲಗುವ ಕೋಣೆಗೆ ಬಂದು ಬಟ್ಟೆ ಹಾಕದೇ ಸ್ವಚ್ಛಂದವಾಗಿ

ಇರಬೇಕೆಂದು ಎನಿಸಿ ಹಾಗೇಯೇ ಇರುತ್ತಾಳೆ. ಹಾಗೇ ಸಿಗರೇಟು ಪ್ಯಾಕು ತೆಗೆದು ಒಂದು ಸಿಗರೇಟನ್ನು ಹಚ್ಚಿ ಬಾಯಿಗಿಟ್ಟಳು. ಆಗ ಕೆಮ್ಮು ಬಂದು ನಂತರ ಕಷ್ಟಪಟ್ಟು ಕೆಮ್ಮನ್ನು ನಿಯಂತ್ರಿಸಿಕೊಂಡಳು. ಆಗ ಆಕೆಗೆ ಹರಿಣನ ನೆನಪು ಬರುತ್ತದೆ. ಎಷ್ಟು ಸ್ವತಂತ್ರವಾಗಿ ಇರಬೇಕೆಂದು ಬಯಸಿದರೂ ಕೂಡ ಎಲ್ಲೋ ಒಂದು ಕಡೆ ಭಯವೂ ಇತ್ತು. ನಂತರ ಆಕೆ ಕೂದಲನ್ನು ಕೂಡ ಸ್ವಚ್ಛಂದವಾಗಿ ಇರಲು ಬಿಡುತ್ತಾಳೆ. ನಂತರ ಸ್ವಚ್ಛಂದವಾಗಿ ಹಜಾರದಲ್ಲಿ ಓಡಾಡುತ್ತಾಳೆ. ರೇಡಿಯೋ ಹಾಕಲು ಹೋಗಿ ಸುಮ್ಮನಾಗುತ್ತಾಳೆ. ಹೀಗೆ ಕೊನೆಗೆ ಆಕೆಗೆ "ತಿರುಗಾಡುತ್ತಿದ್ದಂತೆ ತಾನು ಬೋನಿಗೆ ಹಾಕಿದ ಹುಲಿಯಂತೆ ಅನಿಸಿತು. ಸುತ್ತಲಿನ ಗೋಡೆಗಳು ಪಂಜರದ ಗೋಡೆಗಳಂತೆ ಕಂಡವು. ಪಂಜರದ ಹುಲಿಯಾದರೂ ತನಗೆ ಬೇಕೆಂಬಷ್ಟು ಕೂಗಿಯಾದರೂ ಕೂಗಬಹುದು. ತನಗೆ ಅದೂ ಸಾಧ್ಯವಿಲ್ಲ. ಸದ್ದಿಲ್ಲದೆ ತಾನು ಹೇಗೆ ಇರಲಿ! ಉಸಿರು ಕಟ್ಟುತ್ತಿದೆ ತನಗೆ! ತಾನೇ ಬೇಕೆಂತ ಕಲ್ಪಿಸಿಕೊಂಡ ಈ ವಾತಾವರಣದಲ್ಲಿ ತೆಪ್ಪಗೆ ಓದುತ್ತ ಕೂಡುವುದು ಸಪ್ಪೆ ಪ್ರತಿಕ್ರಿಯೆ ಅನಿಸಿತು. ಸಂಜೆ ಅವ ಬಂದು ಕೇಳಿದರೆ ಹೊಟ್ಟೆ ಹಿಡಿದು ನಕ್ಕಾನು. ಈ ನಾಲ್ಕು ಗೋಡೆಯೊಳಗೆ ತಾನು ಹೀಗೆ ತಿರುಗಿದರೇನು?! ತಿರುಗುವ ಸಂತೋಷ, ಬಂಧನವೇ ಇಲ್ಲದ ಸಂತೋಷ ತಾನು ಪಡೆಯಬೇಕಾದರೆ ಬಾಗಿಲು ತೆಗೆದು ಬೀದಿಗಿಳಿಯಬೇಕು. ಮೈ ಬೀಸಾಗಿ ನಡೆದು ಹೋಗಬೇಕು. ಬೇಕಾದಂತೆ ಓಡಿಯಾಡಬೇಕು. ತಾನು ಫ್ರೀಯಾಗಿ ಓಡಾಡುವುದನ್ನು ಹರಿಣ ಮುದುಕಿ ಹುಡುಗ ಎಲ್ಲ ನೋಡಬೇಕು"[೨೪]. ಹೀಗೆ ಯೋಚಿಸುತ್ತಾಳೆ. ನಂತರ "ಬದುಕು ತೀರ ಇಕ್ಕಟ್ಟಾಗಿದೆ ಎನಿಸಿತು. ತಾನು ಯಾರಿಗಾಗಿಯೋ ಬದುಕುತ್ತಿದ್ದೇನೆ. ತನಗಾಗಿಯಲ್ಲ ಎಂತೆಲ್ಲ ಸಹಾನುಭೂತಿ ಹೊಮ್ಮಿ ಹೊಮ್ಮಿ ಬಂದು ಕಣ್ಣುಗಳು ಕರಿಮೋಡಗಳಾದವು. ಯಾವ ಕ್ಷಣಗಳೂ ಸ್ವತಂತ್ರವಲ್ಲ ಎಲ್ಲ ಬಾಡಿಗೆಯವೇ"[೨೫] ಹೀಗೆ ಯೋಚಿಸುತ್ತಾ ದು:ಖದಿಂದ ನಿದ್ದೆ ಮಾಡಿದಳು. ಹೀಗೆ ಯೋಚಿಸುತ್ತಾ ಮಲಗಿದವಳಿಗೆ ಎಚ್ಚರವಾದಾಗ ಗಂಟೆ ಐದಾಗಿತ್ತು... "ಈಗ ಬರುತ್ತಾನೆ ಅವ ಬೀಗ ತೆಗೆಯುತ್ತಾನೆ. ತಾನು ಹೀಗೆ... ಮಂಚದ ಮೇಲೆ...ಈ ಅವತಾರದಲ್ಲಿ ... ರೂಮಿನ ಬಾಗಿಲೂ ಹಾಕದೆ... ಛಿ!ಛಿ! ಉದ್ದಗನ್ನಡಿ ಅವಳನ್ನೇ ಅವಳಿಗೆ ತೋರಿಸಿತು. ಆದು ನಕ್ಕಂತಾಯಿತು ಬೆಚ್ಚಿದಳು, ತಾನು ಯಾವುದೋ ಸೂಳೆಯನ್ನು ಕಂಡಂತೆ ಕ್ಯಾಬರೆ ನರ್ತಕಿಯನ್ನು ಕಂಡಂತೆ ಅನಿಸಿ.

ಅವಸರದಿಂದ ಎದ್ದು ಸೀರೆಯುಟ್ಟು ತಲೆಬಾಚಿ ಹಣೆಗಿಟ್ಟು ಕನ್ನಡಿ ಮುಂದೆ ನಿಂತಳು. ಗುರುತು ಸಿಕ್ಕಿದವರಂತೆ ಸಮಾಧಾನವಾಯಿತು"[೨೬] ಹೀಗೆ ನಂತರ ಪೇಪರು ಹಿಡಿದು ಸೋಫದ ಮೇಲೆ ಗಂಡನ ಬರುವಿಕೆಗಾಗಿ ಕಾದು ಕುಳಿತಳು.

ಹೀಗೆ ಮಾಲತಿ ಗಂಡಸರಂತೆ, ತಾನು ಸ್ವಚ್ಛಂದವಾಗಿ ಬದುಕಬೇಕೆಂದು ಆಸೆಪಟ್ಟು ಕೊನೆಗೆ ಅದು ಸಾಧ್ಯವಾಗದೇ ತನ್ನೆಲ್ಲಾ ಆಸೆಗಳನ್ನು ಬದಿಗೊತ್ತಿ ಗಂಡನೊಂದಿಗೆ ಬದುಕು ನಡೆಸಲು ನಿರ್ಧರಿಸುತ್ತಾಳೆ.

ಹೆಣ್ಣಿಗೆ ತಾನು ಬೆತ್ತಲಾಗುವುದೂ ಕೂಡ ಒಂದು ಸ್ವಾತಂತ್ರ್ಯದ ಕಲ್ಪನೆಯನ್ನು ಅನುಭವವನ್ನು ತಂದು ಕೊಡುತ್ತದೆ. ನಾಲ್ಕು ಗೋಡೆಗಳ ನಡುವಿನ ಪಂಜರದ ಬದುಕು ಸಾಕಾಗಿ, ತಾನು ತಾನಾಗಿ, ಸಹಜವಾಗಿ ಕಾಣಿಸಿಕೊಳ್ಳಬೇಕು ಎನ್ನುವುದು ಇಲ್ಲಿ ವ್ಯಕ್ತವಾಗುತ್ತದೆ. ಆದರೆ ಅಂತಿಮವಾಗಿ ತನ್ನ ಆಸೆಗಳೇ ನಿರಸನಗೊಂಡು ಕಟ್ಟಿದ ಚೌಕಟ್ಟಿಗೆ ಒಗ್ಗಿಕೊಂಡು ಹೋಗುವುದರ ಮೂಲಕ ವಿಫಲತೆಯನ್ನು ಕಾಣುತ್ತಾಳೆ.

## ೪.೪ ಶೋಷಿತ ಮಹಿಳೆಯ ಚಿತ್ರಣ

'ಅವಲಂಬಿತರು' ಕತೆಯಲ್ಲಿ ಶೋಷಣೆಗೆ ಒಳಗಾದ ಹೆಣ್ಣಿನ ಚಿತ್ರಣ ಕಂಡು ಬರುತ್ತದೆ. ಬಡವಳಾದ ಅಹಲ್ಯ ಶಾರದೆಯ ಶೋಷಣೆಗೆ ಒಳಗಾದ ಹೆಣ್ಣು. ಅಹಲ್ಯಳನ್ನು ಶಾರದೆ ಮಗುವನ್ನು ನೋಡಿಕೊಳ್ಳಲು ಎಂದು ಸೂಚಮ್ಮನೊಂದಿಗೆ ಕೇಳಿ ಕರೆದುಕೊಂಡು ಬರುತ್ತಾಳೆ. ಶಾರದೆ ಕೆಲಸಕ್ಕೆ ಹೋಗುವ ಹೆಣ್ಣು. ಅಹಲ್ಯ ಮಗುವನ್ನು ನೋಡಿಕೊಳ್ಳುವುದರೊಂದಿಗೆ ಅಡಿಗೆ ಕೆಲಸ, ಮನೆಗೆಲಸ ಎಲ್ಲವನ್ನೂ ಮಾಡುತ್ತಿದ್ದಳು. ಆದರೆ ಅಷ್ಟೂ ಕೆಲಸ ಮಾಡಿದರೂ ಕೂಡ ಅಹಲ್ಯಳಿಗೆ ಸಂಬಳ ಕೊಡದೆ ದುಡಿಸಿಕೊಳ್ಳುತ್ತಾಳೆ. ಅಹಲ್ಯ ಇದನ್ನ ಪ್ರತಿಭಟಿಸಬೇಕೆಂದು ಬಯಸುತ್ತಾಳೆ. ಆದರೆ ಹೇಳಲು ಆಗದೆ ಪಕ್ಕದ ಮನೆಯ ಸುಶೀಲ ಹತ್ತಿರ ತನ್ನ ಪ್ರತಿರೋಧವನ್ನ ವ್ಯಕ್ತಪಡಿಸುತ್ತಾಳೆ. ಅದನ್ನ ಅಹಲ್ಯ ಹೀಗೆ ಹೇಳುತ್ತಾಳೆ. ಶಾರದೆಯ ಜೊತೆ ಸಂಬಳ ಎಲ್ಲಿದೆ? ಎಂದು ಕೇಳಿದ್ದಕ್ಕೆ ಆಕೆ "ಅದು ನನ್ನ ಮತ್ತು ನಿನ್ನಮ್ಮನ ನಡುವೆಯ ವಿಷಯ. ನಿಂಗೆ ಬೇಡ' ಎನ್ನುತ್ತಾರೆ. ನಂಗೊಂದು ಹೇರ್‌ಬ್ಯಾಂಡ್ ಬೇಕು, ಪೌಡರು, ಕಾಡಿಗೆ ಹಣೆಗೆ ಎಲ್ಲಬೇಕು. ಇವರದನ್ನು ಮುಟ್ಟಿದರೆ ಗಲಾಟೆ. ನಂಗೆ ತೆಗೆದುಕೊಳ್ಳಲು ದುಡ್ಡಿಲ್ಲ. ನನ್ನನ್ನು ಇಂಥಲ್ಲಿಗೆ ಕಳಿಸಿದಳಲ್ಲ ಅಮ್ಮ! ಅವಳನ್ನು ಕಡಿದು ಹುಗಿಯಬೇಕು"[೫೭]– ಹೀಗೆ ಅಹಲ್ಯ ಕೋಪದಿಂದ ಹೇಳುತ್ತಾಳೆ. ಹಾಗೆ ಒಂದು ದಿನ ಸುಶೀಲ ಅಹಲ್ಯಳಿಗೆ ಹೇರ್‌ಬ್ಯಾಂಡ್ ಕೊಟ್ಟು "ಮಾರಾಯ್ತಿ ನಾನು ಕೊಟ್ಟಿದ್ದೆಂತ ಹೇಳಬೇಡ. ಅಮ್ಮ ಮನೆಯಿಂದ ಬರುವಾಗ ಸ್ವಲ್ಪ ದುಡ್ಡು ಕೊಟ್ಟಿದ್ದಳು. ತೆಗೆದುಕೊಂಡೆ ಎಂತಹೇಳು– ಎಂದದ್ದಕ್ಕೆ 'ಅದೆಲ್ಲ ಹೇಳಿಕೊಡಬೇಕ ನಂಗೆ? ಹೆಚ್ಚು ಕೇಳಿದರೆ ನಿಮ್ಮ ಗಂಡನ ಕಿಸೆಯಿಂದ ಕದ್ದೆ'– ಎನ್ನುತ್ತೇನೆ. ನನಗೆ ದುಡ್ಡು ಕೊಡದೆ ಇವರು ದುಡಿಸಿಕೊಳ್ಳಬಹುದು. ನಾನು ಕದಿಯಬಾರದ?"[೫೮] ಎಂಬುದಾಗಿ ಅಹಲ್ಯ ತನ್ನ ಸಿಟ್ಟನ್ನು ಈ ರೀತಿಯಲ್ಲಿ ತೋರಿಸುತ್ತಾಳೆ. ನಂತರ ಅಹಲ್ಯ ದೊಡ್ಡವಳಾದಳು ಎಂದು ತಿಳಿದ ಮೇಲೆ ಆಕೆಯನ್ನ ಮನೆಗೆ ಕಳಿಸುವ

ತೀರ್ಮಾನ ಮಾಡುತ್ತಾಳೆ ಶಾರದೆ. ಏಕೆಂದರೆ ನಂತರ ಅಹಲ್ಯಳ ಮೇಲೆ ಅವಳಿಗೆ ನಂಬಿಕೆ ಇಲ್ಲ. ಹಾಗಾಗಿ ಮನೆಗೆ ಕಳಿಸಲು ನಿರ್ಧರಿಸಿದ್ದನ್ನು ಅಹಲ್ಯ ಸುಶೀಲಳ ಜೊತೆ ಹೇಳುತ್ತಾಳೆ. “ಮಗು ದೊಡ್ಡದಾಯಿತು. ಇನ್ನು ಬೇಡ”[೩೯] ಎಂದು ಹೇಳಿದ್ದರೆ ನಾನು ಹೋಗುತ್ತಿದ್ದೆ. ಅದು ಬಿಟ್ಟು “ಇನ್ನೂ ಇನ್ನೂ ಇಟ್ಟುಕೊಂಡು ಸಾಕಿದರೆ ಮನೆಯಲ್ಲೇ ಹಾವು ಸಾಕಿದಂತೆ ಆದೀತು ಎಂದರು. ಯಾರನ್ನ ಎಷ್ಟೆಂತ ಕಾಯಲಿಕ್ಕಾಗುತ್ತದೆ ಎಂತಲೂ ಹೇಳಿದರು. ನನಗೆ ಅರ್ಥವಾಗುವುದಿಲ್ಲ ಅಂತವ? ಇವರು ಯಾರನ್ನು ಕಾಯಬೇಕಂತೆ? ನನ್ನನ್ನಂತೂ ಬೇಡ. ಬೇಕಾದರೆ ಇವರ ಗಂಡನ್ನ ಕಾದುಕೊಳ್ಳಲಿ. ಎಲ್ಲಬಿಟ್ಟು ಇವರ ಗಂಡನ ಹತ್ತಿರವೇ ಹೋಗಬೇಕ ನಾನು? ಅವನ ಸೊಡ್ಡು ಕಂಡರೆ ಸಾಕಲ್ಲ. ಆ ಗಂಡನಿಗೆ ಆ ಹೆಂಡತಿ! ಲಗ್ತು! ಬಹ್ಮನಿಗೆ ಕಷ್ಟ ನಿಜಕ್ಕೂ' 'ಛೆ ಛೆ. ಸಿಟ್ಟಿನಲ್ಲಿ ಬಾಯಿಗೆ ಬಂದದ್ದು ಅನ್ನಬಾರದು'. 'ಬಾಯಿಗೆ ಬಂದದ್ದು ಎನ್ನುತ್ತೀರ ನೀವೂ? ನಿಮಗೇನು ಗೊತ್ತು ಸುಸಿಲಕ್ಕ? ನನ್ನ ಚೀಲ ಕೂಡ ಜಪ್ತಿ ಮಾಡಿದರು. ಅಲ್ಲಿ ಸಿಕ್ಕಿತು ಮಣ್ಣು. ನೋಡಿ ಇಲ್ಲಿ. ಬಸ್ ಛಾರ್ಜ್ ಮಾತ್ರ ಕೊಟ್ಟಿದ್ದಾರೆ. ಬೇಗ ಹೋಗಲಿ ಎಂತ. ಹೆಚ್ಚಿಗೆ ಒಂದು ಕಾಸು ನನ್ನ ಕೈ ಮೇಲೆ! ಎರಡು ಹಳೆ ಹಪ್ಪಟೆ ಸೀರೆ ಕೊಟ್ಟಿದ್ದಾರೆ. ಅಮ್ಮನಿಗೆ ಇಷ್ಟೇ ಸಾಕಾಗುತ್ತದೆ. ಶಾರದಕ್ಕ ಒಳ್ಳೆಯವರಾಗುವುದಕ್ಕೆ. ಹೇಳಿದೆನಲ್ಲ. ಅಮ್ಮನನ್ನ ಕಡಿಯಬೇಕು ಮೊದಲು ಎಂತ”[೪೦]– ಇಲ್ಲೆಲ್ಲಾ ಅಹಲ್ಯಳಿಗೆ ಶಾರದಳ ಮೇಲೆ ಬಹಳ ಕೋಪವಿದೆ. ಜೊತೆಗೆ ತನ್ನ ಅಮ್ಮನ ಮೇಲೆ ಕೂಡ. ಯಾಕೆಂದರೆ ಶಾರದಳ ಮನೆಯಲ್ಲಿ ಅಷ್ಟು ಚೆನ್ನಾಗಿ ಅವರೆಲ್ಲರ ಚಾಕರಿ ಮಾಡಿದರೂ ಕೂಡ ಆಕೆಗೆ ಇವಳ ಮೇಲೆ ಸ್ವಲ್ಪವೂ ಕರುಣೆ ಇಲ್ಲ. ಈಕೆಯನ್ನ ಚೆನ್ನಾಗಿ ದುಡಿಸಿಕೊಂಡದ್ದಕ್ಕೆ ಕೂಡ ಆಕೆ ದುಡ್ಡು ಕೊಡುವುದಿಲ್ಲ. ಆಕೆ ಬಡವಳು, ಚಿಕ್ಕವಳು ಎಂಬ ಕಾರಣಕ್ಕೆ ಶೋಷಿಸುತ್ತಾಳೆ. ಹೀಗೆ ಒಂದು ಹೆಣ್ಣಿನಿಂದ ಇನ್ನೊಂದು ಹೆಣ್ಣಿನ ಶೋಷಣೆ ನಡೆಯುವುದನ್ನು ಈ ಕತೆಯಲ್ಲಿ ಕಾಣಬಹುದು.

'ಅಮ್ಮಚ್ಚಿಯೆಂಬ ನೆನಪು' ಕತೆಯಲ್ಲಿ ಅಮ್ಮಚ್ಚಿ ಪುರುಷ ದೌರ್ಜನ್ಯವನ್ನ ಪ್ರತಿಭಟಿಸಿ ನಿಲ್ಲುವ ಧೈರ್ಯವಂತೆ ಹೆಣ್ಣಾಗಿ ಕಂಡು ಬರುತ್ತಾಳೆ. ಆಕೆಯ ಮನಸ್ಸಿಗೆ ವಿರುದ್ಧವಾಗಿ ನಡೆದುಕೊಳ್ಳುವವರನ್ನು ಪ್ರತಿಭಟಿಸಿ ನಿಲ್ಲುವ ಶಕ್ತಿ ಆಕೆಯಲ್ಲಿತ್ತು. ಆಕೆಯ ಅಮ್ಮ ಸೀತತ್ತೆ ಶಾಂತ ಸ್ವಭಾವದವಳು. ಅವಳು ಕಷ್ಟವನ್ನು ಸಹಿಸಿಕೊಂಡು ಬದುಕು ಸಾಗಿಸಿದವಳು. ಅಮ್ಮಚ್ಚಿ ಆರು ತಿಂಗಳ ಮಗುವಾಗಿದ್ದಾಗ ತಂದೆ ತೀರಿಹೋಗುತ್ತಾರೆ. ಅಂದಿನಿಂದ ಸೀತತ್ತೆಗೆ ಸಹಾಯಮಾಡುತ್ತಾ. ಆಸರೆಯಾಗಿ ನಿಂತವನು ೧೨ ವರುಷ ಪ್ರಾಯದ ವೆಂಕಪ್ಪಯ್ಯ ಹಾಗಾಗಿ ಆತ ಅಂದಿನಿಂದ ಇವರ ಮನೆಯಲ್ಲಿಯೆ ಉಳಿದುಕೊಂಡ. ಸೀತತ್ತೆಗೆ ಆತನನ್ನು ಕಂಡರೆ ಇಷ್ಟ. ಆದರೆ ಅಮ್ಮಚ್ಚಿಗೆ ವೆಂಕಪ್ಪಯ್ಯನನ್ನು ಕಂಡರೆ ಆಗುತ್ತಿರಲಿಲ್ಲ. ಆತ ಆಕೆಯ ಎಲ್ಲಾ ವಿಷಯದಲ್ಲೂ ತಲೆ ಹಾಕುವುದು ಈಕೆಗೆ ಇಷ್ಟವಾಗುತ್ತಿರಲಿಲ್ಲ. ಹಾಗಾಗಿ ಆತನ ವಿರುದ್ಧ ತಿರುಗಿ

ಬೀಳುತ್ತಿದ್ದಳು. ಆಕೆ ಏನೇ ಮಾಡಿದರೂ ವೆಂಕಪ್ಪಯ್ಯ ವಿರೋಧಿಸುತ್ತಿದ್ದ. ಒಂದು ದಿನ ಆಕೆ ಸತ್ಯನಾರಾಯಣ ಪೂಜೆಗೆ ಜಡೆ ಬಿಟ್ಟುಕೊಂಡು ಹೋಗುತ್ತಿದ್ದುದನ್ನ ಕಂಡು ವೆಂಕಪ್ಪಯ್ಯ "ಏನಿಯ? ಇದೇನಿಯ ಯೇಸ. ಬೊಂಬಾಯಿ ಲೇಡಿಯ ಹಂಗೆ, ವಾರೆ ಬಕ್ತಲೆ! ಶಿ..ಶಿ.. ನಡೆ ಮನೆಗೆ ಸರಿಯಾಯಿ ಬಾಚಿಂಡು ಹೋವು' ಎಂದ. ಅದಕ್ಕೆ ಅಮ್ಮಚ್ಚಿ 'ಹೋವುಯ, ನೀ ಮನಗೆ ಹೋವು. ಹೋಯಿದ್ದು ಗಡದ್ದು ಒಂದು ಲೋಟೆ ಚಾಯ ಕುಡಿ. ಅಮ್ಮನ ಹಕ್ಕೈ ಹೇಳ್, ಹೆಂಗೂ ಮಾಡಿ ಕೊಡ್ತ್ಲ್ ... ನನ್ನ ಸುದ್ದಿಗೆ ಮಿನಿ ಬರಳೆ. ಬೋಳು ಮಂಡೆ ಕಾಕ. ನಿಂಗೆ ವಾರೆ ಬಿಡು, ಯಾವ ಬಕ್ತಲೆಯ ತೆಗೆಯಗಾಗದ ಸಂಕಟಕ್ಕೆ ನಂಗೆ ಯಾಕೆ ಹೇಳ್ತೆ? ಎಂದವಳು. ನನ್ನ ಕೈ ಹಿಡಿದು 'ಬಾಯ ಬೀಸ ನೀನು. ಮೆಲ್ಲ ನಡೆದ್ರೆ ಹಿಂಗೇ. ನಾಯಿ ಸಂತಾನಗಳೆಲ್ಲ ಎದುರಾತೋ.' ಎಂದು ಎಳೆದುಕೊಂಡು ಮುಂದೆ ನಡೆದೇ ಬಿಟ್ಟಳು! 'ಸುಟ್ಟದ್, ಎಲ್ಲಿ ತಯಾರಾಯ್ತೋ, ನಮ್ಮ ಮನೆಗೇ..."[೬೧] ಹೀಗೆ ಗೊಣಗುತ್ತಾ ಹೋಗುತ್ತಾಳೆ. ಹೀಗೆ ಈಕೆಯ ವಿಷಯದಲ್ಲಿ ವೆಂಕಪ್ಪಯ್ಯ ಮೂಗು ತೂರಿಸುವುದು ಆಕೆಗೆ ಸ್ವಲ್ಪವೂ ಇಷ್ಟವಾಗುತ್ತಿರಲಿಲ್ಲ. ಅಮ್ಮಚ್ಚಿಗೆ ಮೊದಲೇ ವೆಂಕಪ್ಪಯ್ಯನ ಮುಖ ಕಂಡರೆ ಆಗುತ್ತಿರಲಿಲ್ಲ. ಹಾಗಿದ್ದರೂ ಕೂಡ ಆತ ತಾನೇ ಮನೆಗೆ ಹಕ್ಕುದಾರನೆಂಬಂತೆ "ಅವಳನ್ನು ಮದುವೆಯಾವುಗೆ ಇನ್ನು ಯಾವ ಪುಣ್ಯಾತ್ಮ ಬಪ್ಪ? ಮಗಳ ಚಿಂತೆ ನೀವು ಮಾಡಳೆ ನಾನಿದ್ದೆ"[೬೨] ಎಂದು ಸೀತತ್ತೆ ಹತ್ತಿರ ಹೇಳುತ್ತಾ, ಊರು ತುಂಬಾ ಹೇಳುತ್ತಾ ಬರುತ್ತಾನೆ. ಅದ್ದರಿಂದ ಅಮ್ಮಚ್ಚಿಗೆ ವೆಂಕಪ್ಪಯ್ಯನ ಮೇಲೆ ಇನ್ನೂ ಸಿಟ್ಟು ಬಂದು ಅಸಹ್ಯವಾಗುತ್ತದೆ.

ಹಾಗೇ ಅಮ್ಮಚ್ಚಿ ತನ್ನ ಗೆಳತಿಯೊಂದಿಗೆ ಪೇಟೆಗೆ ಹೋಗಿ ಬರುವಾಗ ಸಾಮಾನು ತೆಗೆದುಕೊಂಡು ಬರೋಣ ಎಂದು ಹೊರಟಾಗ ಅದಕ್ಕೂ ವೆಂಕಪ್ಪಯ್ಯ ಮಧ್ಯೆ ಪ್ರವೇಶಿಸಿ ಹೋಗುವುದನ್ನು ತಡೆಯುತ್ತಾನೆ. ಹೀಗೆ ಅಮ್ಮಚ್ಚಿಯ ಎಲ್ಲಾ ವಿಷಯದಲ್ಲೂ ತೆಡೆಗೋಡೆಯಾಗುತ್ತಾನೆ ವೆಂಕಪ್ಪಯ್ಯ. ಅವನು ಪೇಟೆಗೆ ಎಂದು ಹೇಳಿ ಶಂಭಟ್ಟರ ಮನೆಗೆ ಹೋಗುವುದು ಎಂದು ಹೇಳಿದಾಗ ಇವಳು ಅಲ್ಲ ಎಂದು ಕೂಗಿದ್ದರೂ ಕೂಡ ಸೀತತ್ತೆಗೆ ಕೇಳುವುದಿಲ್ಲ. "ಹೌದ್ದ ಹೆಣ್ಣೆ, ಹಿಂಗಾ ಇಚಾರ?...' ಅಂತೆಲ್ಲ ಇರುತ್ತಲ್ಲ?

'ಅವರ ಮನೆಗೆ ಹೋತಾರೆ ನಿಂಗೆ ಹೇಳಿಯೇ ಹೋಪೆ. ಸುಳ್ಳು ಹೇಳ್ತ ಗರ್ಜು ಇವತ್ತಿಗೆ ನಂಗಿಲ್ಲೆ. ಈ ಬಿರ್ಕನಕಟ್ಟೆ ಭೂತದ ಮಾತು ಕೇಂಡ್‌ದ್ ನಂಗೆ ಯಾಕೆ ಬೈತೆ ನೀನು?'

ಸೀತತ್ತೆ ಸ್ಫೋಟವಾದರು, 'ಅಯ್ಯೋ..... ಹೆಚ್ಚುವಾದ ಮಾಡಳೆ ಮಾರಾಯ್ತೇ, ಇನ್ನು ಹೆಚ್ಚು ವಾದ ಮಾಡಳೆ. ಯೆಂಕಪ್ಪಯ್ಯನೂ ಇಲ್ಲದೇ ಹೋದ್ರೆ ಆಗ ಗೊತ್ತಾಕ್ಕ್ ನಿಂಗೆ ನಮ್ಮ ಅವಸ್ಥೆ ಎನ್ ಅಂದ್ ...."[೬೩] ಇಲ್ಲೆಲ್ಲಾ ಸೀತತ್ತೆಗೆ ವೆಂಕಪ್ಪಯ್ಯನನ್ನು ಮಗಳು ವಿರೋಧಿಸುವುದು ಇಷ್ಟವಾಗುವುದಿಲ್ಲ. ಏಕೆಂದರೆ ಸೀತತ್ತೆಗೆ

ವೆಂಕಪ್ಪಯ್ಯನ ಸಹಾಯವಿಲ್ಲದೆ ಬದುಕುವುದು ಸಾಧ್ಯವಿಲ್ಲ. ಆದರೆ ಅಮ್ಮಚ್ಚಿ ಹಾಗಲ್ಲ. ಆಕೆಗೆ ಸ್ವತಂತ್ರವಾಗಿ ಬದುಕುವ ಆಸೆ. ಆ ಧೈರ್ಯ ಆಕೆಯಲ್ಲಿದೆ. ಆದರೆ ಅದಕ್ಕೆ ವೆಂಕಪ್ಪಯ್ಯ ಅಡ್ಡಿಯಾಗುತ್ತಾನೆ. ಅಮ್ಮಚ್ಚಿಯ ಯಾವ ಆಸೆಗಳನ್ನೂ ಪೂರೈಸುವುದಕ್ಕೆ ಆತ ಬಿಡುವುದಿಲ್ಲ. ಒಮ್ಮೆ ಅಮ್ಮಚ್ಚಿ ರಮಾಟೀಚರ್ ಹತ್ತಿರ ಹೋಗಿ ರವಕೆ ಬಟ್ಟೆಯನ್ನು ಕೊಟ್ಟು ಹಿಂದೆ ಗುಬ್ಬಿ ಇಟ್ಟು ಹೊಲಿಯಲು ಹೇಳುತ್ತಾಳೆ. ಆದರೆ ಆ ವಿಷಯದಲ್ಲೂ ಕೂಡ ವೆಂಕಪ್ಪಯ್ಯ ಮೂಗು ತೂರಿಸುತ್ತಾನೆ.

ಆ ನಂತರ ಅಮ್ಮಚ್ಚಿ ತುಂಬಾ ಸಿಟ್ಟಲ್ಲಿ ಇರುತ್ತಾಳೆ. ಹೀಗೆ ಇದ್ದಾಗ ವೆಂಕಪ್ಪಯ್ಯ ಎಂಟು ದಿನ ಇರಲಿಲ್ಲ. ತಿರುಪತಿಗೆ ಹೋಗಿದ್ದ. ಆಗ ಅಮ್ಮಚ್ಚಿ ತನ್ನ ಗೆಳತಿಯನ್ನು ಕರೆದುಕೊಂಡು "ಅವ ಹೆಂಗೂ ಇಲ್ಲೆ. ಬಾ. ಆ ಕುದ್ರಾಳಿನ ಕೋಣೆಗೆ ಹೋಪ. ಏನೆಲ್ಲ ಬೇತಿದ ಕಾಂಬ"[೬೪]. ಹೀಗೆ ಹೇಳುತ್ತಾ ಹೋಗುತ್ತಾರೆ. ಆತನ ರೂಮಲ್ಲಿ ಮೊದಲು ಕಂಡಿದ್ದೆ ಆತನ ಶರ್ಟು. ಮೊದಲೇ ಆತನ ಮೇಲೆ ಸಿಟ್ಟಿದ್ದ ಅಮ್ಮಚ್ಚಿ ಆ ಶರ್ಟನ್ನು ಹರಿದು ಮುಂಭಾಗದಿಂದ ಗುಬ್ಬಿಯನ್ನ ತೆಗೆದು ಹಿಂಬಾಗಕ್ಕೆ ಹೊಲಿದು ಹಾಗೇ ಅದೇ ಜಾಗದಲ್ಲಿ ಶರ್ಟನ್ನು ಇಟ್ಟು ಬರುತ್ತಾಳೆ. ಆತನ ಮೇಲಿನ ಸಿಟ್ಟನ್ನು ಈ ರೀತಿಯಲ್ಲಿ ತೀರಿಸಿಕೊಳ್ಳುತ್ತಾಳೆ.

ತಿರುಪತಿಗೆ ಹೋದ ವೆಂಕಪ್ಪಯ್ಯ ಮತ್ತೆ ಮನೆಗೆ ಬರುತ್ತಾನೆ. ಬಂದು ತನ್ನ ಕೋಣೆಗೆ ಹೋಗಿ ಶರ್ಟು ಹಾಕಲು ನೋಡಿದಾಗ ಶರ್ಟು ಹಾಳಾಗಿದ್ದನ್ನು ಕಂಡು ಸಿಟ್ಟಿನಲ್ಲಿ ಬಂದು ಅಮ್ಮಚ್ಚಿಗೆ ಸರಿಯಾಗಿ ಹೊಡೆಯುತ್ತಾನೆ. ಅಮ್ಮಚ್ಚಿಯನ್ನ ಶೋಷಣೆ ಮಾಡುತ್ತಾನೆ. ಅಂದರೆ ಅಮ್ಮಚ್ಚಿಯ ಎಲ್ಲಾ ಕೆಲಸ ಕಾರ್ಯಗಳನ್ನು ಆತ ತಡೆಯುತ್ತಾನೆ. ಆತ ಗಂಡೆಂಬ ಕಾರಣಕ್ಕೆ ಅವನು ಹೇಳಿದ್ದೇ ನಡೆಯಬೇಕೆಂಬ ಹಟ ಆತನಿಗೆ. ಆತನ ಆ ಅಧಿಕಾರ ಚಲಾಯಿಸುವುದು ಅಮ್ಮಚ್ಚಿಗೆ ಇಷ್ಟವಾಗುತ್ತಿರಲಿಲ್ಲ. ಅಮ್ಮಚ್ಚಿಗೆ ಸ್ವತಂತ್ರವಾಗಿ ಬದುಕಬೇಕೆಂಬ ಇಚ್ಛೆ. ಹೀಗಿದ್ದರೂ ಕೂಡ ಕೊನೆಗೆ ಆಕೆಗೆ ವೆಂಕಪ್ಪಯ್ಯನೊಂದಿಗೆ ಮದುವೆಯಾಗುತ್ತದೆ. ಅಮ್ಮಚ್ಚಿ ಎಷ್ಟೇ ಪ್ರತಿಭಟಿಸಿದರೂ ಕೂಡ ಕೊನೆಗೆ ಆತನನ್ನೇ ಒಪ್ಪಿಕೊಳ್ಳಲೇಬೇಕಾಯಿತು.

ಹೀಗೆ ಒಟ್ಟಿನಲ್ಲಿ ಈ ಅಧ್ಯಾಯದಲ್ಲಿ ಸ್ತ್ರೀ ಆಕೃತಿಗಳು ಬೇರೆ ಬೇರೆ ರೀತಿಯಲ್ಲಿ ಕಾಣಿಸಿಕೊಂಡಿರುವುದನ್ನು ವೈದೇಹಿಯವರ ಈ ಮೇಲಿನ ಕೆಲವು ಕಥೆಗಳ ಮೂಲಕ ನೋಡಬಹುದಾಗಿದೆ.

# ಸಂದರ್ಭಸೂಚಿ


೧. ಅಲೆಗಳಲ್ಲಿ ಅಂತರಂಗ : ವೈದೇಹಿ ; ಪು: ೧೫೧; ೨೦೦೫

೨. ಅಲೆಗಳಲ್ಲಿ ಅಂತರಂಗ : ವೈದೇಹಿ ; ಪು: ೧೫೨; ೨೦೦೫

೩. ಅಲೆಗಳಲ್ಲಿ ಅಂತರಂಗ : ವೈದೇಹಿ ; ಪು: ೧೫೩; ೨೦೦೫

೪. ಅಲೆಗಳಲ್ಲಿ ಅಂತರಂಗ : ವೈದೇಹಿ ; ಪು: ೧೫೩; ೨೦೦೫

೫. ಅಲೆಗಳಲ್ಲಿ ಅಂತರಂಗ : ವೈದೇಹಿ ; ಪು: ೧೫೩; ೨೦೦೫

೬. ಅಲೆಗಳಲ್ಲಿ ಅಂತರಂಗ : ವೈದೇಹಿ ; ಪು: ೧೫೩; ೨೦೦೫

೭. ಅಲೆಗಳಲ್ಲಿ ಅಂತರಂಗ : ವೈದೇಹಿ ; ಪು: ೧೫೫; ೨೦೦೫

೮. ಅಲೆಗಳಲ್ಲಿ ಅಂತರಂಗ : ವೈದೇಹಿ ; ಪು: ೧೫೬; ೨೦೦೫

೯. ಅಲೆಗಳಲ್ಲಿ ಅಂತರಂಗ : ವೈದೇಹಿ ; ಪು: ೧೫೬; ೨೦೦೫

೧೦. ಅಲೆಗಳಲ್ಲಿ ಅಂತರಂಗ : ವೈದೇಹಿ ; ಪು: ೨೮೯; ೨೦೦೫

೧೧. ಅಲೆಗಳಲ್ಲಿ ಅಂತರಂಗ : ವೈದೇಹಿ ; ಪು: ೨೯೩; ೨೦೦೫

೧೨. ಅಲೆಗಳಲ್ಲಿ ಅಂತರಂಗ : ವೈದೇಹಿ ; ಪು: ೨೯೩; ೨೦೦೫

೧೩. ಅಲೆಗಳಲ್ಲಿ ಅಂತರಂಗ : ವೈದೇಹಿ ; ಪು: ೨೯೬; ೨೦೦೫

೧೪. ಅಲೆಗಳಲ್ಲಿ ಅಂತರಂಗ : ವೈದೇಹಿ ; ಪು: ೨೯೯; ೨೦೦೫

೧೫. ಅಲೆಗಳಲ್ಲಿ ಅಂತರಂಗ : ವೈದೇಹಿ ; ಪು: ೨೯೯; ೨೦೦೫

೧೬. ಅಲೆಗಳಲ್ಲಿ ಅಂತರಂಗ : ವೈದೇಹಿ ; ಪು: ೨೯೯; ೨೦೦೫

೧೭. ಅಲೆಗಳಲ್ಲಿ ಅಂತರಂಗ : ವೈದೇಹಿ ; ಪು: ೩೦೧; ೨೦೦೫

೧೮. ಅಲೆಗಳಲ್ಲಿ ಅಂತರಂಗ : ವೈದೇಹಿ ; ಪು: ೯೬; ೨೦೦೫

೧೯. ಅಲೆಗಳಲ್ಲಿ ಅಂತರಂಗ : ವೈದೇಹಿ ; ಪು: ೯೮; ೨೦೦೫

೨೦. ಅಲೆಗಳಲ್ಲಿ ಅಂತರಂಗ : ವೈದೇಹಿ ; ಪು: ೧೦೨; ೨೦೦೫

೨೧. ಅಲೆಗಳಲ್ಲಿ ಅಂತರಂಗ : ವೈದೇಹಿ ; ಪು: ೧೧೭; ೨೦೦೫

೨೨. ಅಲೆಗಳಲ್ಲಿ ಅಂತರಂಗ : ವೈದೇಹಿ ; ಪು: ೧೧೪; ೨೦೦೫

೨೩. ಅಲೆಗಳಲ್ಲಿ ಅಂತರಂಗ : ವೈದೇಹಿ ; ಪು: ೧೧೪; ೨೦೦೫

೨೪. ಅಲೆಗಳಲ್ಲಿ ಅಂತರಂಗ : ವೈದೇಹಿ ; ಪು: ೧೧೪; ೨೦೦೫

೨೫. ಅಲೆಗಳಲ್ಲಿ ಅಂತರಂಗ : ವೈದೇಹಿ ; ಪು: ೧೨೦; ೨೦೦೫

೨೬. ಅಲೆಗಳಲ್ಲಿ ಅಂತರಂಗ : ವೈದೇಹಿ ; ಪು: ೧೨೦; ೨೦೦೫

೨೭. ಅಲೆಗಳಲ್ಲಿ ಅಂತರಂಗ : ವೈದೇಹಿ ; ಪು: ೧೨೧; ೨೦೦೫

೨೮. ಅಲೆಗಳಲ್ಲಿ ಅಂತರಂಗ : ವೈದೇಹಿ ; ಪು: ೩೩೨; ೨೦೦೫

೨೯. ಅಲೆಗಳಲ್ಲಿ ಅಂತರಂಗ : ವೈದೇಹಿ ; ಪು: ೩೩೩; ೨೦೦೫

೩೦. ಅಲೆಗಳಲ್ಲಿ ಅಂತರಂಗ : ವೈದೇಹಿ ; ಪು: ೩೩೪–೩೩೫; ೨೦೦೫

೩೧. ಅಲೆಗಳಲ್ಲಿ ಅಂತರಂಗ : ವೈದೇಹಿ ; ಪು: ೩೩೫; ೨೦೦೫

೩೨. ಅಲೆಗಳಲ್ಲಿ ಅಂತರಂಗ : ವೈದೇಹಿ ; ಪು: ೩೩೬; ೨೦೦೫

೩೩. ಅಲೆಗಳಲ್ಲಿ ಅಂತರಂಗ : ವೈದೇಹಿ ; ಪು: ೩೩೬; ೨೦೦೫

೩೪. ಅಲೆಗಳಲ್ಲಿ ಅಂತರಂಗ : ವೈದೇಹಿ ; ಪು: ೩೩೭; ೨೦೦೫

೩೫. ಅಲೆಗಳಲ್ಲಿ ಅಂತರಂಗ : ವೈದೇಹಿ ; ಪು: ೩೩೮; ೨೦೦೫

೩೬. ಅಲೆಗಳಲ್ಲಿ ಅಂತರಂಗ : ವೈದೇಹಿ ; ಪು: ೩೩೮; ೨೦೦೫

೩೭. ಅಲೆಗಳಲ್ಲಿ ಅಂತರಂಗ : ವೈದೇಹಿ ; ಪು: ೩೩೮; ೨೦೦೫

೩೮. ಅಲೆಗಳಲ್ಲಿ ಅಂತರಂಗ : ವೈದೇಹಿ ; ಪು: ೩೩೮; ೨೦೦೫

೩೯. ಅಲೆಗಳಲ್ಲಿ ಅಂತರಂಗ : ವೈದೇಹಿ ; ಪು: ೩೪೦–೩೪೧; ೨೦೦೫

೪೦. ಅಲೆಗಳಲ್ಲಿ ಅಂತರಂಗ : ವೈದೇಹಿ ; ಪು: ೧೬೬; ೨೦೦೫

೪೧. ಅಲೆಗಳಲ್ಲಿ ಅಂತರಂಗ : ವೈದೇಹಿ ; ಪು: ೧೬೬; ೨೦೦೫

೪೨. ಅಲೆಗಳಲ್ಲಿ ಅಂತರಂಗ : ವೈದೇಹಿ ; ಪು: ೧೬೬; ೨೦೦೫

೪೩. ಅಲೆಗಳಲ್ಲಿ ಅಂತರಂಗ : ವೈದೇಹಿ ; ಪು: ೧೬೬; ೨೦೦೫

೪೪. ಅಲೆಗಳಲ್ಲಿ ಅಂತರಂಗ : ವೈದೇಹಿ ; ಪು: ೧೬೬; ೨೦೦೫

೪೫. ಅಲೆಗಳಲ್ಲಿ ಅಂತರಂಗ : ವೈದೇಹಿ ; ಪು: ೧೬೭; ೨೦೦೫

೪೬. ಅಲೆಗಳಲ್ಲಿ ಅಂತರಂಗ : ವೈದೇಹಿ ; ಪು: ೧೬೯ ; ೨೦೦೫

೪೭. ಅಲೆಗಳಲ್ಲಿ ಅಂತರಂಗ : ವೈದೇಹಿ ; ಪು: ೧೬೦; ೨೦೦೫

೪೮. ಅಲೆಗಳಲ್ಲಿ ಅಂತರಂಗ : ವೈದೇಹಿ ; ಪು: ೧೬೦; ೨೦೦೫

೪೯. ಅಲೆಗಳಲ್ಲಿ ಅಂತರಂಗ : ವೈದೇಹಿ ; ಪು: ೧೬೦; ೨೦೦೫

೫೦. ಅಲೆಗಳಲ್ಲಿ ಅಂತರಂಗ : ವೈದೇಹಿ ; ಪು: ೧೬೦; ೨೦೦೫

೫೧. ಅಲೆಗಳಲ್ಲಿ ಅಂತರಂಗ : ವೈದೇಹಿ ; ಪು: ೧೬೧; ೨೦೦೫

೫೨. ಅಲೆಗಳಲ್ಲಿ ಅಂತರಂಗ : ವೈದೇಹಿ ; ಪು: ೧೬೧; ೨೦೦೫

೫೩. ಅಲೆಗಳಲ್ಲಿ ಅಂತರಂಗ : ವೈದೇಹಿ ; ಪು: ೧೬೨; ೨೦೦೫

೫೪. ಅಲೆಗಳಲ್ಲಿ ಅಂತರಂಗ : ವೈದೇಹಿ ; ಪು: ೧೬೪; ೨೦೦೫

೫೫. ಅಲೆಗಳಲ್ಲಿ ಅಂತರಂಗ : ವೈದೇಹಿ ; ಪು: ೧೬೪; ೨೦೦೫

೫೬. ಅಲೆಗಳಲ್ಲಿ ಅಂತರಂಗ : ವೈದೇಹಿ ; ಪು: ೧೬೫; ೨೦೦೫

೫೭. ಅಲೆಗಳಲ್ಲಿ ಅಂತರಂಗ : ವೈದೇಹಿ ; ಪು: ೧೯೧; ೨೦೦೫

೫೮. ಅಲೆಗಳಲ್ಲಿ ಅಂತರಂಗ : ವೈದೇಹಿ ; ಪು: ೧೯೧; ೨೦೦೫

೫೯. ಅಲೆಗಳಲ್ಲಿ ಅಂತರಂಗ : ವೈದೇಹಿ ; ಪು: ೧೯೩; ೨೦೦೫

೬೦. ಅಲೆಗಳಲ್ಲಿ ಅಂತರಂಗ : ವೈದೇಹಿ ; ಪು: ೧೯೩; ೨೦೦೫

೬೧. ಅಲೆಗಳಲ್ಲಿ ಅಂತರಂಗ : ವೈದೇಹಿ ; ಪು: ೫೭೫–೫೭೬; ೨೦೦೫

೬೨. ಅಲೆಗಳಲ್ಲಿ ಅಂತರಂಗ : ವೈದೇಹಿ ; ಪು: ೫೭೬; ೨೦೦೫

೬೩. ಅಲೆಗಳಲ್ಲಿ ಅಂತರಂಗ : ವೈದೇಹಿ ; ಪು: ೫೭೯; ೨೦೦೫

೬೪. ಅಲೆಗಳಲ್ಲಿ ಅಂತರಂಗ : ವೈದೇಹಿ ; ಪು: ೫೮೧–೫೮೨; ೨೦೦೫

# ೫: ವೈದೇಹಿಯವರ ಕತೆಗಳಲ್ಲಿ ಕಾಣಿಸಿಕೊಳ್ಳುವ ಸ್ತ್ರೀ ಅಂತರಂಗದ ಚಿತ್ರಣ

೫.೧: ಪ್ರಸ್ತಾವನೆ

೫.೨: ಸಂಪ್ರದಾಯವನ್ನು ಒಪ್ಪುವ ಮಾದರಿ

೫.೩: ಸಂಪ್ರದಾಯವನ್ನು ಪ್ರತಿರೋಧಿಸುವ ಮಾದರಿ.

# ೫. ವೈದೇಹಿಯವರ ಕತೆಗಳಲ್ಲಿ ಕಾಣಿಸಿಕೊಳ್ಳುವ ಸ್ತ್ರೀ ಅಂತರಂಗದ ಚಿತ್ರಣ

## ೫.೧ ಪ್ರಸ್ತಾವನೆ

ವೈದೇಹಿ ಕತೆಗಳು ಸ್ತ್ರೀ ಅಂತರಂಗದ ಒಳತುಮುಲಗಳನ್ನು ಭಾವಪೂರ್ಣವಾಗಿ ಚಿತ್ರಿಸುತ್ತದೆ. ಪಾತ್ರಗಳು ತಮ್ಮ ಸುತ್ತಲಿನ ಜಗತ್ತಿಗೆ ಸ್ಪಂದಿಸುವ ಬಗೆಯಲ್ಲಿ ಅಂತರಂಗದ ಒಲವು ಬಹಿರಂಗವಾಗುತ್ತದೆ. ವ್ಯಕ್ತಿತ್ವದ ಬಗ್ಗೆ ಕಪಟತನವಿಲ್ಲದೆ ಸ್ವವ್ಯಕ್ತಿತ್ವದ ನಿರೂಪಣೆ ಕತೆಗಳ ಮೂಲಕ ನಡೆಯುತ್ತದೆ. ಒಂದೆಡೆ ಸಂಪ್ರದಾಯಕ್ಕೆ ಶರಣಾಗಿ, ಅದರ ಬೇಗುದಿಗಳನ್ನೆಲ್ಲಾ ಸ್ವೀಕಾರ ಮಾಡುತ್ತಲೇ ಜೀವನಕ್ಕೆ ಅರ್ಥ ಹುಡುಕುವ ವ್ಯಕ್ತಿತ್ವಗಳು ಮುನ್ನಲೆಯಲ್ಲಿ ಕಾಣಿಸಿಕೊಳ್ಳುತ್ತವೆ. ಇನ್ನೊಂದೆಡೆ ಪ್ರತಿರೋಧದ ನೆಲೆಯಲ್ಲಿ ಸಂಪ್ರದಾಯವನ್ನು ಮೀರಿ ಹೊಸತನಕ್ಕೆ ಮುಖಮಾಡುತ್ತವೆ. ಪ್ರತಿರೋಧ ಎನ್ನುವುದು ವೈಯಕ್ತಿಕ ನೆಲೆಯಿಂದಲೇ ಹುಟ್ಟಿಕೊಳ್ಳುತ್ತವೆ. ಕುಟುಂಬದ ಒಳಗೆ ನಿರಾಕರಿಸಲ್ಪಟ್ಟಿರುವ ತನ್ನ ಹಕ್ಕುಗಳಿಗೆ ಧ್ವನಿ ಎತ್ತುವ ಹೆಣ್ಣು ಬದಲಾವಣೆಯ ಅಪೇಕ್ಷೆಗೆ ಸಂಕೇತವಾಗುತ್ತಾಳೆ. ಕತೆಗಾರ್ತಿ ತನ್ನ ನಿರೂಪಣೆಯಲ್ಲಿ ಪಾತ್ರಗಳ ಜೊತೆಗೆ ಸಮದೂರವನ್ನು ಕಾಯ್ದುಕೊಂಡಿರುವುದು ಕಂಡುಬರುತ್ತದೆ.

## ೫.೨. ಸಂಪ್ರದಾಯವನ್ನು ಒಪ್ಪುವ ಮಾದರಿ

"ಚಿಪ್ಪು" ಕತೆಯಲ್ಲಿ ಬರುವ ಯಶೀಯ ಚಿತ್ರಣ. ಯಶೀ ಸಂಪ್ರದಾಯಸ್ಥ ಮನೆತನದ ಹೆಣ್ಣು. ಹಾಗೇ ಅದಕ್ಕೆ ಹೊಂದಿಕೊಂಡು ಬೆಳೆದವಳು. ಆದರೆ ಅವಳಿಗೂ ಒಂದು ಮನಸ್ಸಿದೆ. ಅವಳಿಗೂ ತನ್ನದೇ ಆದ ಆಸೆ, ಆಕಾಂಕ್ಷೆಗಳಿರುತ್ತವೆ ಎಂಬುದರ ಅರಿವು ಇಲ್ಲದಿರುವಂತೆ ವರ್ತಿಸುವ ಮನೆಯವರು. ಯಶೀಯ ಮದುವೆಯ ಸಂದರ್ಭದಲ್ಲಿ ಆಕೆಯನ್ನ ಒಂದು ಮಾತು ಕೇಳದೇ ತಾವೇ ನಿರ್ಧರಿಸುವಂತದ್ದು. ಅಂದರೆ ಅಪ್ಪನಿಗೆ ಕೂಡ ತನ್ನ ಮಗಳಿಗೆ ಇಂತಹ ವರನೇ ಬೇಕು ಎಂಬ ಆಸೆ ಇರುತ್ತದೆ. ಆದರೆ ಅದು ಮಗಳಿಗೆ ಇಷ್ಟವಾಗುತ್ತದೆಯಾ ಎಂಬ ಯೋಚನೆ ಇರುವುದಿಲ್ಲ, ಅಥವಾ ವರ ಹೇಗಿರಬೇಕು ಎಂದು ಕೇಳುವಂತಹ ವ್ಯವಧಾನ ಕೂಡ ಮನೆಯವರಿಗಿಲ್ಲ. "ಅಪ್ಪ ತನಗಾಗಿ ವರ ಹುಡುಕುತ್ತಿದ್ದಾರೆ. ತುಂಬ ಇದ್ದವನನ್ನು ಹಿಡಿದು ಅವನಿಗೆ ತನ್ನನ್ನು ಕೊಡಬೇಕೆಂಬ ಆಸೆ ಅಪ್ಪನಿಗೆ. ಅವನು ನೋಡಲೂ ಚೆಂದವಿರಬೇಕು"[೧]. ಯಶೀಯ ಬಗ್ಗೆ ಅಪ್ಪ ಮುಂಬಯಿಯಿಂದ ಬಂದ ಚಿಕ್ಕಪ್ಪನೊಂದಿಗೆ ಗುಣಗಾನ ಮಾಡುತ್ತಿದ್ದದನ್ನ ಕಂಡ ತಂಗಿಯರು ತಮಾಷೆಯಿಂದ ಅಕ್ಕನನ್ನು ನೋಡುತ್ತಾರೆ. "ಅಪ್ಪನ ನೋಡು. ನಮ್ಮ ಮುಂದೆ ಉರಿ ಕಾರುತ್ತಿದ್ದರೂ

ಬಂದವರ ಮುಂದೆ ಎಷ್ಟು ಸೊಗಸಾಗಿ ಗುಣಗಾನ ಮಾಡುತ್ತಾರಲ್ಲ!' ಎಂಬಂತೆ"[೨]. ಅಪ್ಪನ ಮಾತು ಕೇಳಿ ಯಶೀಗೂ ಹಾಗೇ ಅನಿಸುತ್ತದೆ. "ಅಪ್ಪನ ಮನಸ್ಸಿನಲ್ಲಿಯೂ ತಮ್ಮ ಬಗ್ಗೆ ಒಂದು ಅಭಿಪ್ರಾಯವೆಂತ, ತಮ್ಮ ಚೆಂದ, ಅಂದ ಬುದ್ಧಿಯನ್ನು ಗುರುತಿಸುವ ಶಕ್ತಿ ಎಂತ ಇದೆಯಲ್ಲ! ಅವರ ಬಾಯಿಂದ ಕೇಳಿದ ವರ್ಣನೆ ಅದೆಷ್ಟೇ ಕಳಪೆಯದಾಗಿರಲಿ, ಏನೋ ಒಂದು ಬಗೆಯ ಖುಷಿ ತರುತ್ತದೆ"[೩]. ಆದರೆ ಈ ಗುಣಗಾನವೆಲ್ಲಾ ಮದುವೆ ಮಾಡಲು ಎಂದು ತಿಳಿದಾಗ ಮನಸ್ಸಿಗೆ ಬೇಸರವಾಗುತ್ತದೆ. ಅದಕ್ಕೆ ಸರಿಯಾಗಿ ಚಿಕ್ಕಪ್ಪ ತನ್ನ ಮಗಳನ್ನು ನೋಡಲು ಬಂದ ಮುಂಬಯಿ ವರನ ಬಗ್ಗೆ ಹೇಳಿ ಜಾತಕ ಕೊಡುತ್ತೇನೆ ಎಂದಾಗ, ಅಪ್ಪ ಯಾವುದೇ ಪ್ರಶ್ನೆಗಳನ್ನ ಕೇಳದೆ ಒಪ್ಪಿಗೆ ಕೊಡುತ್ತಾರೆ. ಆದರೆ ಯಶೀಯ ಮನಸ್ಸಲ್ಲಿ "ಯಾರದು? ಈ ಶಾಲಿನಿಗೆ ಬಂದ ವರ? ಅವನೇನು? ಎಲ್ಲಿಯವನು? ಹೇಗಿದ್ದಾನು? ..... ತನ್ನ ಮನಸ್ಸಿನಲ್ಲಿ ಏಳುತ್ತಿದ್ದ ಸಹಸ್ರ ಸಹಸ್ರ ಪ್ರಶ್ನೆಗಳಲ್ಲಿ ಒಂದಾದರೂ ಅಪ್ಪನ ಮನದಲ್ಲಿ ಏಳಬೇಡವೆ? ಒಂದೇ ಒಂದು? ಅದೂ ಇರಲಿ. ಶಾಲಿನಿಗೆ ಅದು ಯಾಕಾಗಲಿಲ್ಲ?..

ಇದಾದರೂ ಕೇಳಬೇಕೆಂದು ಹೊಳೆಯುವುದಿಲ್ಲವೆ ಹಾಗಾದರೆ? ತಾನಿಟದ್ದನ್ನು ಒಪ್ಪವಾಗಿ ಬಡಿಸುತ್ತ ವಿಧೇಯ ಪತ್ನಿಯಂತೆ, ಅಪ್ಪ ಹೇಳಿದ್ದಕ್ಕೆಲ್ಲ 'ನೀವಂದದ್ದಕ್ಕೆ ನನ್ನ ಸಹಿ' ಎಂಬಂತೆ, ಭಾವ ಭಕ್ತಿಯೇ ರೂಪು ತಳೆದಂತೆ ನಿಂತುಕೊಂಡಿರುವ ಅಮ್ಮನನ್ನು 'ಹೆತ್ತವಳು ನೀನು ತಾನೆ? ಹೆತ್ತದ್ದು ಮಾತ್ರವೇನು? ಪ್ರಶ್ನೆ ಕೇಳಲು ನಿನ್ನ ಜೀವನದಲ್ಲಿ ಕಸುವಿಲ್ಲವೆ?' ಎಂತ ಕೇಳಬೇಕೆನಿಸುತ್ತದೆ"[೪]. ಇಲ್ಲಿ ಅಪ್ಪನೊಂದಿಗೆ ತಾಯಿ ಕೂಡ ಸೇರಿಕೊಳ್ಳುತ್ತಾರೆ. ಅಂದರೆ ಯಶೀಯ ಮನಸ್ಸಲ್ಲಿ ಮೂಡಿಲ್ಲ. ಯಶೀಯನ್ನ ಒಂದೂ ಮಾತು ಕೂಡ ಕೇಳಬೇಕೆನಿಸಿಲ್ಲ. ಅವರ ಜೊತೆಯಲ್ಲಿ ರಂಗಜ್ಜಿ ಕೂಡ ಮಾತು ಸೇರಿಸುತ್ತಾಳೆ. "ಏನಾದರೂ ಮಾಡಬೇಕು ನೀನು. ಯಶೀಯ ಮದುವೆ ಎಬ್ಬಿಸುವ ಹೊಣೆ ನಿನಗೆ ಕಟ್ಟಿದ್ದೇವೆ. ಈ ವರ್ಷ ಅವಳನ್ನು ಹೊರಗೆ ಹಾಕಿದರೆ ಇವ ಬದುಕಿದ"[೫] ಎಂದು ಹೇಳುವಂತಹ ಮಾತು ಕೇಳಿ ಯಶೀಗೆ ತುಂಬಾನೇ ಕೋಪ ಬರುತ್ತದೆ. ಆದರೆ ಅದನ್ನ ವ್ಯಕ್ತಪಡಿಸುವ ಧೈರ್ಯ ಆಕೆಯಲ್ಲಿಲ್ಲ. ಹಾಗೆಯೇ ರಂಗಜ್ಜಿಗೆ ಯಶೀಯ ಬಗ್ಗೆ ಒಳ್ಳೆಯ ಅಭಿಪ್ರಾಯವಿದೆ. "ಅವಳಷ್ಟು ಪಾಪದ ಹುಡುಗಿ ಸಿಗಲಿಕ್ಕಿಲ್ಲ, ಹಿರಿಯರು ಏನು ಹೇಳಿದರೂ ಹೂಂ ಎನ್ನುವವಳು ಅವಳು"[೬] ಎಂಬ ಮಾತು. ಇಲ್ಲಿ ಮುಂಬಯಿ ವರನ ಬಗ್ಗೆ ಯಶೀಗೆ ಕುತೂಹಲವಿದೆ. ಆಕೆ ಮನಸಲ್ಲೆ ಯೋಚಿಸುತ್ತಾಳೆ. "ಮುಂಬಯಿ! ಅಲ್ಲಿಯವರ– ಹೇಗಿದ್ದಾನು? ..... ಕೆನ್ನೆಯವರೆಗೆ ಇಳಿಬಿಟ್ಟ ಕೂದಲು. ಉದ್ದ ಮೀಸೆ ಹುಲುಸಾಗಿ ಬೆಳೆದ ಕ್ರಾಪು, ಪ್ಯಾಂಟು, ಶರಟು–ಒರಟು. ಹಸಿದದ್ದೊ, ತಂಪಿನದೋ, ಶಾಂತವೋ, ಮತ್ತವೋ, ಇನ್ನೇನೋ ತುಂಬಿದ ಕಣ್ಣುಗಳು ....... ಕೆಟ್ಟು ಹೋದವನೋ, ಕೆಡಲಿರುವವನೋ ಅಥವಾ ಜೀವನದ ಹಳೆಯ ತತ್ವಗಳಿಗೇ ಅಂಟಿಕೊಂಡು ಅವುಗಳನ್ನು ತೂಗಿ ನೋಡುವ, ತೂಗಿ ಸಾಧಿಸುವ,

ತೂಗಿ ತನ್ನದೇ ಆದ ಹೊಸ ತತ್ವಗಳನ್ನು ಸೃಷ್ಟಿಸುವ ವೀರ್ಯವನ್ನೇ ಕಳೆದು ಕುಳಿತಿರುವವನೋ! ಹೆಂಡತಿಯನ್ನು ಆಳಬೇಕೆಂದಿರುವವನೋ, ಆಳಲಾರದೆ ಅಳುವವನೋ! ಅವಳನ್ನು ಅವಳ ಗೊಡವೆಗೇ ಬಿಡದಿರುವವನೋ, ಅಪ್ಪನಿಗೆ ಏನೂ ಕುತೂಹಲವಾಗುವುದಿಲ್ಲವೆ ಹಾಗಾದರೆ?"[೮] ಇಲ್ಲಿ ಆಕೆಗೆ ಅವನಂದ ಚಂದದ ಬಗ್ಗೆ ಯೋಚನೆ ಇಲ್ಲ. ಆತನ ಗುಣನಡತೆಯ ಬಗ್ಗೆ ಕುತೂಹಲವಿದೆ. ಅಪ್ಪನಿಗೆ ಇದೇ ಕುತೂಹಲ ಯಾಕಿಲ್ಲ ಎಂದು ಯೋಚಿಸುತ್ತಾಳೆ. ಇದನ್ನ ಮನೆಯಲ್ಲಿ ಅಪ್ಪ ಇಲ್ಲದ ಸಮಯ ನೋಡಿ ತಾಯಿಯ ಮುಂದೆ ಪ್ರಶ್ನಿಸುತ್ತಾಳೆ. "ಏನು ಕೇಳದೆ ಹೇಗಿದ್ದೀ ಹೇಳು ನೀನು! ಮದುವೆಯಾಗುವವಳು ನಾನು. ನೀನೇನು ಯಾವುದರ ಪರಿಜ್ಞಾನವೂ ಇಲ್ಲದಂತೆ ಹಾಯಾಗಿ ಇರುತ್ತೀಯಲ್ಲ!"[೯] ಇದನ್ನು ಅಪ್ಪನ ಮುಂದೆ ಕೇಳುವ ಧೈರ್ಯ ಆಕೆಗಿಲ್ಲ. ಇಷ್ಟು ಹೇಳಿ ಒಟ್ಟಿಗೆ "ನಾನು ಹೀಗೆ ಹೇಳಿದೆನೆಂತ ಅಪ್ಪನೊಡನೆ ಹೇಳಿಬಿಡಬೇಡ ಮತ್ತೆ"[೧೦] ಎಂಬ ಮಾತನ್ನು ಸೇರಿಸುತ್ತಾಳೆ. ಆ ಮೇಲೆ ಅಮ್ಮ ಅಪ್ಪನೊಂದಿಗೆ ಆ ಹುಡುಗನ ಬಗ್ಗೆ ಪ್ರಶ್ನೆ ಮಾಡಿದಾಗ "ಬೇಕಾದಷ್ಟು ಆಸ್ತಿ ಇದೆ, ಹುಡುಗ ಓದಿದ್ದಾನೆ, ಇಷ್ಟಂತೂ ನಿಜ. ಅದೆಲ್ಲ ಯಾಕೆ ಈಗ? ನನಗೆ ಗೊತ್ತಿಲ್ಲವೆ ಯಶೀಯನ್ನು ಯಾರಿಗೆ ಕೊಡಬೇಕಂತ?"[೧೧] ಎಂದು ಹೇಳುವ ಮಾತು ಯಶೀಯ ಕಿವಿಗೆ ಬೀಳುತ್ತದೆ. ಅಪ್ಪನಿಗೆ ಒಟ್ಟಿನಲ್ಲಿ ಮಗಳ ಮದುವೆ ಮಾಡಿಬಿಡಬೇಕು ಅಷ್ಟೆ. ಅವಳು ಮದುವೆಯ ಬಗ್ಗೆ ಕಲ್ಪಿಸಿಕೊಂಡು ಅಪ್ಪನ ಮನಸ್ಸಿನ ಬಗ್ಗೆ ಯೋಚಿಸುತ್ತಾಳೆ "ಇಷ್ಟಕ್ಕೂ ಅಪ್ಪ ಮಾಡುವ ಮದುವೆಯ ವೈಖರಿ ಎಂತಹುದು ಎಂತ ತಿಳಿದಿಲ್ಲವೆ ತನಗೆ? 'ಹುಡುಗಯೋಗ್ಯ'– ಎಂದು ನಾಲ್ಕು ಜನ ಹೇಳಿದರೆ ಸರಿ. ತಮ್ಮ ದೃಷ್ಟಿಯಿಂದ ಅಳೆಯುವ ಅಗತ್ಯವಿಲ್ಲ. ಆತ ಯೋಗ್ಯನಾಗಿಯೇ ಬಿಟ್ಟ. ಹುಡುಗಿಯ ಕೈ ಹಿಡಿಯಲು ಸಮರ್ಥನೂ ಆದ, ಕೊನೆಗಾಗುವ ಬೌದ್ಧಿಕ ತಿಕ್ಕಾಟಕ್ಕೆ ಆ ನಾಲ್ಕು ಜನ ಬರುತ್ತಾರೆಯೆ? ಇವರೆಲ್ಲ ಸಾವಿರ ಸುಳ್ಳು ಹೇಳಿ ಒಂದು ಮದುವೆ ಮಾಡು– ಎನ್ನುವ ಬೇರನ್ನು ಗಟ್ಟಿಯಾಗಿ ಹಿಡಿದು ನೇತಾಡುತ್ತಲೇ ಇರುವವರೆಂದು ಅಪ್ಪನಿಗೆ ಹೇಗೆ ತಿಳಿಯಬೇಕು? ಹೇಗೆ ತಿಳಿಸಬೇಕು?"[೧೨] ಹೀಗೆಲ್ಲಾ ಆಲೋಚಿಸುವ ಯಶೀಯ ಕಲ್ಪನೆಯೇ ಬೇರೆ ಇರುತ್ತದೆ. "ತನಗೆ ಹೊಸತು ಬೇಕು. ಹೊಚ್ಚ ಹೊಸ ಬಾಳುವೆ ಬೇಕು, ತಾನು ತನ್ನವನಾಗುವವನ ಮುಖದಲ್ಲಿ ನಗುವನ್ನು ಕಂಡು ಜೀವನದಲ್ಲಿ ಸಾರ್ಥಕತೆಯ ಭಾವವನ್ನು ಅನುಭವಿಸುವವಳಲ್ಲ. ಅವಳ ಕೊಳೆಯಾದ ಪ್ಯಾಂಟು ಶರಟುಗಳನ್ನು ಸೋಪಿನ ನೀರಿನಲ್ಲಿ ನೆನೆಸಿ ಒಗೆ ಒಗೆದು, ಅದರ ಶುಭ್ರತೆಯಲ್ಲಿ, ಆ ಶುಭ್ರ ಉಡುಗೆಯನ್ನು ತೊಟ್ಟು ಅವನಲ್ಲಿ ಒಲವು ತೋರುವವಳಲ್ಲ, ಸಂಜೆ ಹೊತ್ತು ಅವನು ಬರುವ ವೇಳೆಗೆ ಸಿಂಗರಿಸಿಕೊಂಡು ತಿಂಡಿ ಕಾಫಿ ತಯಾರು ಮಾಡಿಟ್ಟು 'ಬೇಸರವಿದ್ದರೂ ತುಟಿಯಲ್ಲಿ ನಗೆಯನ್ನು ಲೇಪಿಸಿಕೊಂಡು' ನಿಲ್ಲುವವರಲ್ಲಿ ತನಗೆ ನಂಬಿಗೆ ಇಲ್ಲ. ಅದರಲ್ಲಿದ್ದಷ್ಟು ನಾಟಕೀಯತೆ ಇನ್ನಾವುದರಲ್ಲಿಯೂ ಇಲ್ಲ ಎನ್ನುವವಳು ತಾನು.

ಅವನಿಗೆ ಬೇಕೆಂದಾಗೆಲ್ಲ ತಾನು ತನ್ನನ್ನು ಅವನಿಗೆ ಕೊಡುವವಳಲ್ಲ. ತನಗೆ ಬೇಕೆನಿಸಿದಾಗೆಲ್ಲ ಅವನು ಸಿಗಲೇಬೇಕೆಂಬ ಹಠವೂ ತನಗಿಲ್ಲ. ಎಷ್ಟೇ ಬೆರೆತು ಹೋದರೂ ಪೂರ್ಣ ಸ್ವಾರ್ಥ ಖಂಡಿತವಾಗಿಯೂ ಬಿಡುವವಳಲ್ಲ. ಹೆಚ್ಚೇಕೆ, ತನ್ನ ದಾಂಪತ್ಯ ತಾನು ಕಂಡ ಅನೇಕ ದಾಂಪತ್ಯಗಳಂತೆ ಇರಬಾರದು. ಅಲ್ಲಿ ಪ್ರೀತಿ ವಿಶ್ವಾಸವೆಲ್ಲ ಯಾಂತ್ರಿಕವಾಗಿದೆ. ಈ ಯಾಂತ್ರಿಕತೆಯನ್ನು ಒಡೆಯಬೇಕು. ಅದಕ್ಕೆ ಜೀವ ತುಂಬಬೇಕು. ಹೃದಯ ಹೃದಯವನ್ನು ಪ್ರೀತಿಸಬೇಕೆ ವಿನಾ ಗುಂಗುರು ಕೂದಲಿನಲ್ಲಿ, ಎಸಳು ಮೂಗಿನಲ್ಲಿ, ಬಿಳಿಯ ಚರ್ಮದಲ್ಲಿ, ನಸುನಗುವಿನಲ್ಲಿ ಮಾತ್ರವೇ ಒಲವು ಹುಡುಕಿ ಒಳಗಿನ ಆತ್ಮದ ಗುರುತನ್ನು ಹೆಚ್ಚಿದಂತೆ ನಟಿಸುವ ಈ ನಟನೆಗೆ ಪೂರ್ಣವಿರಾಮ ಬೀಳಬೇಕು, ತಾನು ಮೇಲೇರಬೇಕು, ತನ್ನ ಬದುಕೇ....”[೧೩]. ಹೀಗೆಲ್ಲಾ ಯೋಚಿಸುವ ಯಶೀ ತನ್ನ ಬದುಕಿನ ಬಗ್ಗೆ ತನ್ನದೇ ಕಲ್ಪನೆ ಇದೆ. ತನ್ನ ಗಂಡನ ಬಗ್ಗೆ, ತನ್ನ ದಾಂಪತ್ಯದ ಬಗ್ಗೆ ಒಂದು ಕನಸಿದೆ, ಭಾವನೆ ಇದೆ. ಆದರೆ ಅದನ್ನ ಅರ್ಥಮಾಡಿಕೊಳ್ಳುವ ಮನಸ್ಸು ಆ ಕುಟುಂಬದಲ್ಲಿ ಯಾರಿಗೂ ಇಲ್ಲ. ಕೊನೆಗೆ ಆ ಹುಡುಗನಿಗೂ ಕೂಡ ಹುಡುಗಿಯನ್ನ ನೋಡಬೇಕೆಂಬ ಆಸಕ್ತಿಯಿಲ್ಲ. ಹಾಗಾಗಿ ಹುಡುಗಿಯನ್ನ ನೋಡಲು ಹುಡುಗನ ತಂದೆ ಬರುವಂತದ್ದು. ಅದನ್ನೆಲ್ಲಾ ಕೇಳಿ “ಅಷ್ಟು ಅನಾಸಕ್ತಿ ಇದ್ದವನು ಮದುವೆ ಯಾಕಂತೆ ಆಗುವುದು? ಎಂಬ ಪ್ರಶ್ನೆ ನನಗೆ ಅಲ್ಲಿಯೇ ಕರಗುತ್ತದೆ”[೧೪]. ಆದರೆ ಈತರದ ಮನಸ್ಸಲ್ಲಾಗುವ ಭಾವನೆಗಳನ್ನ ಯಾರೊಂದಿಗೂ ಹೇಳಕ್ಕಾಗಲ್ಲ. ಹೇಳುವ ಧೈರ್ಯವೂ ಆಕೆಗಿಲ್ಲ. ಹೇಳಿದರೂ ಕೂಡ ಅರ್ಥಮಾಡಿಕೊಳ್ಳುವ ಮನಸ್ಸು ಅಲ್ಲಿ ಯಾರದ್ದಿಲ್ಲ. ಹಾಗಾಗಿ ಅಪ್ಪ ನೋಡಿದ ವರನನ್ನು ಮದುವೆಯಾಗಲು ಒಪ್ಪುತ್ತಾಳೆ.

ಯಶೀಯ ಮಾನಸಿಕ ತುಮುಲದಲ್ಲಿ ಇರುವುದು ಒಂದು ಮಾನವೀಯ ಬಯಕೆ. ಹೆಣ್ಣಿನ ಸಹಜ ಅಂತರಂಗದ ಅಪೇಕ್ಷೆ. ಆದರೆ ಧ್ವನಿ ಇಲ್ಲದೆ ಅವ್ಯಾವುದು ಹೊರಗೆ ಬಾರದೇ ಪುರುಷ ಪ್ರಧಾನ ಸಂಪ್ರದಾಯವಾದಿ ಯೋಚನೆಗಳೇ ಗೆಲ್ಲುತ್ತದೆ. ಇಲ್ಲಿಯ ಕುಟುಂಬದ ಚೌಕಟ್ಟಿನಲ್ಲಿ ಮಾನವೀಯ ಬಯಕೆಗಳನ್ನು ಸದಸ್ಯರೂ ಅರ್ಥೈಸಿಕೊಂಡಿದ್ದಾರೆ. ಹಾಗಾಗಿ ಇಲ್ಲಿ ಅಂತಿಮವಾಗಿ ನೀಡುವ ಒಪ್ಪಿಗೆಯೂ ಕೂಡ ಒಂದು ರೀತಿಯ ಪ್ರತಿಭಟನೆಯೇ ಆಗಿದೆ ಎಂದು ಭಾವಿಸಬಹುದು.

‘ಬೀಳುಬೇರು’ ಕತೆಯಲ್ಲಿ ಬರುವ ಇಂದಿ. ಈಕೆಯ ಮನಸ್ಸಿನ ವೇದನೆ ಇಡೀ ಕತೆಯಲ್ಲಿ ವ್ಯಕ್ತವಾಗುತ್ತಾ ಹೋಗುತ್ತದೆ. ಈ ಕತೆಯಲ್ಲಿ ಒಂದು ಹೆಣ್ಣನ್ನ ಮಾರುಕಟ್ಟೆಯ ವಸ್ತುವನ್ನು ನೋಡುವಂತೆ ಕಾಣುತ್ತಾರೆ. ಹಾಗೇನೇ ಒಂದು ಪ್ರಾಣಿಯನ್ನ ಕಂಡಂತೆ ಕೂಡ. ಅನೇಕ ಹುಡುಗರು ಬಂದು ನೋಡಿ ಮದುವೆಗೆ ಒಪ್ಪದೆ ಬಿಟ್ಟು ಹೋಗುತ್ತಾರೆ.

ಈ ಇಡೀ ಕತೆಯಲ್ಲಿ ಒಂದು ಎಮ್ಮೆಯನ್ನು ಕೊಂಡುಕೊಳ್ಳುವ ಮಾತುಕತೆಯ ಜೊತೆ ಜೊತೆಗನೇ ಇಂದಿಯ ಮದುವೆಯ ಮಾತುಕತೆ ಕೂಡ ನಡೆಯುತ್ತದೆ. ಇಲ್ಲಿ ಸರಿಯಾದ ಎಮ್ಮೆಗಾಗಿ ಹುಡುಕಾಟ ನಡೆಯುತ್ತಿರುತ್ತದೆ. ಹಾಗೇನೇ ತನ್ನ ಮಗಳಿಗೆ ಒಂದು ಒಳ್ಳೆಯ ವರನ ಹುಡುಕಾಟ ಕೂಡ ನಡೆಯುತ್ತಿರುವುದನ್ನು ಕಾಣುತ್ತೇವೆ.

ಇಲ್ಲಿ ಅಪ್ಪನಿಗೆ ಒಂದು ಎಮ್ಮೆಯನ್ನು ಕೊಂಡುಕೊಳ್ಳಬೇಕೆಂಬ ಆಸೆ. ಆದರೆ ಅಮ್ಮನಿಗೆ ಮಗಳ ಮದುವೆಯ ಚಿಂತೆ. ಎಮ್ಮೆ ತಗೊಂಡು ದುಡ್ಡನ್ನೆಲ್ಲಾ ಖರ್ಚುಮಾಡಿದರೆ, ಮಗಳ ಮದುವೆ ಎದ್ದರೆ ದುಡ್ಡು ಆಗಬೇಕಲ್ಲ ಎಂಬ ಯೋಚನೆ. ಹಾಗಾಗಿ ತಾಯಿ "ರಾತ್ರಿ ಊಟಕ್ಕೆ ಬಡಿಸುವಾಗ ಊಟದ ತಟ್ಟೆಗೋ ಎಂಬಂತೆ ಅವಳು ಹೇಳುತ್ತಲೇ ಇದ್ದಳು 'ಇನ್ನು ಖರ್ಚಿಲ್ಲವ? ದೇವರು ಮನಸ್ಸು ಮಾಡಿದರೆ, ಬಂದವ ಒಪ್ಪಿದರೆ, ಇಂದಿಗೆ ಮದುವೆ ಮಾಡಬೇಡವ? ಇನ್ನೂ ಎಷ್ಟು ವರ್ಷ ಅಂತ ಮನೆಯಲ್ಲಿ ಕೂಡಿಸಿಕೊಳ್ಳುವುದು? ಚೌಕಾಸಿ ಮಾಡಿ ಮಾಡಿ ಮೂರು ನಾಲ್ಕು ಗಂಡುಗಳನ್ನು ಕಳೆದಾಯಿತಲ್ಲ. ಈ ಸಲ ಹೆಚ್ಚೊ ಕಡಿಮೆಯೋ ಒಪ್ಪಿಯೇ ಬಿಡುವುದು. ಇನ್ನೂ ಇನ್ನೂ ಹುಡುಕಾಟ ಮಾಡಿದರೆ ಕುತ್ತಿಗೆಗೆ ಬಂದೀತು"[೧೫]. ಎಂಬ ಮಾತು. ಆದರೆ ಈ ಮಾತು ಕೇಳಿ ಇಂದಿಯ ಮನಸ್ಸಿಗೆ ತುಂಬಾ ಬೇಸರವಾಗುತ್ತದೆ. ಅಮ್ಮ ಇಷ್ಟು ಗೊಣಗುತ್ತಿದ್ದರೂ ಕೂಡ ಅಪ್ಪ ಎಮ್ಮೆಯ ಬಗ್ಗನೇ ಮಾತನಾಡುತ್ತಿರುತ್ತಾರೆ. ತಮ್ಮಣ್ಣನೊಂದಿಗೆ ಎಮ್ಮೆ ತರುವ ವಿಚಾರದ ಬಗ್ಗೆ ಕೇಳುತ್ತಾರೆ. ಆತ ಯಾವುದಕ್ಕೂ ತಲೆ ಕೆಡಿಸಿಕೊಳ್ಳದೇ ಸುಮ್ಮನಿದ್ದಾನೆ. ಇದನ್ನೆಲ್ಲಾ ಕಂಡು ಅಪ್ಪನಿಗೆ ಒಬ್ಬೊಬ್ಬರು ಒಂದೊಂದು ತರ ಕಾಣಿಸುತ್ತಾರೆ. "ಎಲ್ಲರೂ ಯಂತ್ರಗಳಂತೆ ಕಂಡರು ನನಗೆ. ಇವಳೊಂದು ಕೂಗುವ ಯಂತ್ರದಂತೆ. ಇವರೆಲ್ಲ ಒಳಗೆ ಆಗುವ ಗದ್ದಲವನ್ನು ಹೊರಗೆಡವದೆ ಒತ್ತಿಡುವ ಯಂತ್ರಗಳಂತೆ. ಇವರಿಗೆ ಔಷಧಿ ಯಾವುದು? ಇವರು ಸೀದಾ ಮಾತನಾಡುವುದನ್ನು ಸೀದಾ ನಡೆಯುವುದನ್ನು ಕಲಿಯುವುದು ಯಾವಾಗ? ಇಂದಿಗೆ ಯಾಕೆ ಕಣ್ಣೀರು, ಗುಟ್ಟಿನಲ್ಲಿ? 'ಅಪ್ಪ, ನನಗೆ ಹೀಗೆ ಹೀಗೆ ಅನಿಸುತ್ತದೆ ಎಂತ ಹೇಳಬಾರದ? ನನಗೆ ನೆನಪಿದ್ದ ಹಾಗೆ ಅವಳು ಬಾಯಿ ಸರಿಯಾಗಿ ಬಿಟ್ಟದ್ದು ಒಂದೇ ಸಲ. ಹೋದ ಸಲದ ಹುಡುಗ ಬಂದಾಗ. ಅವ ಹೋದ ಕೂಡಲೆ 'ಇಸ್ಸಿ ನಾನು ಇನ್ನು ಮೇಲೆ ಹಾಗೆ ಕೊಡುವುದಿಲ್ಲ, ನಾನೇನು ವಸ್ತುವಲ್ಲ, ಪ್ರಾಣಿಯಲ್ಲ'– ಅಂತ ಜೀವ ಹೋದವರಂತೆ ಅತ್ತಿದ್ದಳು ಇಂದಿ"[೧೬]. ಇಲ್ಲಿ ಅಪ್ಪನಿಗೆ ಮಗಳ ಮನಸ್ಸಲ್ಲಿ ನೋವಿದೆ ಎಂಬುದು ಅರ್ಥವಾಗಿದೆ. ಆದರೆ ಆ ನೋವಿಗೆ ಸ್ಪಂದಿಸುವುದಕ್ಕೆ ಕಷ್ಟವಾಗುತ್ತದೆ. ಇಂದಿ ಅತ್ತಾಗ ಅಪ್ಪ ಅದೇನು ಮಾಡಕ್ಕಾಗಲ್ಲ. ಮದುವೆಯಾಗಬೇಕಾದರೆ ಅದೆಲ್ಲ ಇದ್ದಿದ್ದೆ ಎಂದು ಹೇಳಿ ಆಕೆಯ ಬಾಯಿ ಮುಚ್ಚಿಸಿದ್ದರು. ಆ ಮೇಲಿನಿಂದ ಇಂದಿ ಕೂಡ ತನ್ನ ಭಾವನೆಗಳನ್ನ ಮನಸ್ಸಲ್ಲೇ ಬಚ್ಚಿಟ್ಟುಕೊಂಡು ದು:ಖಿಸುತ್ತಿದ್ದಳು. ಆಕೆಗೆ

ಪ್ರತಿಭಟಿಸುವ ಮನಸ್ಸಿದ್ದರೂ ಕೂಡ ಪ್ರತಿಭಟಿಸುವ ಶಕ್ತಿ, ಧೈರ್ಯ ಆಕೆಯಲ್ಲಿಲ್ಲ. ಹಾಗೇ ಒಂದು ದಿನ ಸುಬ್ಬಣ್ಣಯ್ಯ ಬಂದು ನಾಳೆ ಇಂದಿಯನ್ನು ನೋಡಲು ಹುಡುಗನ ಕಡೆಯವರು ಬರುತ್ತಾರಂತೆ ಎಂದು ಹೇಳಿದರು. ಆಗ ಅಪ್ಪ "ನಾಲ್ಕಾರು ದಿನ ತಡೆದು ಬರುತ್ತಾರೆ ಎಂದಿರಿ ಮೊನ್ನೆ.

'ಅಂದದ್ದು ಹೌದು. ಆದರೆ ಇತ್ತ ಕಡೆಯ ಮೂರು ನಾಲ್ಕು ಹುಡುಗಿಯರನ್ನ ಒಂದು ಸಲಕ್ಕೆ ನೋಡಿಕೊಂಡು ಹೋಗುವ ಅಂದಾಜು ಅವರದು ಇವತ್ತು ಬೆಳಿಗ್ಗೆಯೇ ಮನೆಯಿಂದ ಹೊರಟಿದ್ದರು. ಬಹುಶಃ ಇವತ್ತು ಎರಡು ಹುಡುಗಿಯರನ್ನ ಕಂಡು ಆಗಿರಬಹುದು. ನಾಳೆ ಬೆಳಿಗ್ಗೆ ನಿಮ್ಮಲ್ಲಿಗೆ ಬರುತ್ತಾರಂತೆ. ಕನ್ಯಾನ್ವೇಷಣೆಯೂ ಕಷ್ಟ ನೋಡಿ. ಎಲ್ಲ ಸರಿಯಾದದ್ದು ಸಿಗಬೇಕಲ್ಲ'– ಎಂದರು"[೧೭].

ಇಲ್ಲಿ ಒಂದು ಮಾರುಕಟ್ಟೆಯ ವಸ್ತುವನ್ನು ನೋಡುವಂತೆ, ಅಂದರೆ ಒಂದಿಲ್ಲದಿದ್ದರೆ ಇನ್ನೊಂದು ಹಾಗೆ ದಿನಕ್ಕೆ ಮೂರು ನಾಲ್ಕು ಹುಡುಗಿಯರನ್ನ ನೋಡುವುದು. ಇದನ್ನ ಕೇಳಿ ಇಂದಿಗೆ ತುಂಬಾ ಬೇಸರವಾಗುತ್ತದೆ.

ಸುಬ್ಬಣ್ಣಯ್ಯ ಹೊರಟು ಹೋದ ಮೇಲೆ ಇಂದಿ ಮೂಲೆಯಲ್ಲಿ ಕುಳಿತು ಕಣ್ಣೀರೊರಸಿಕೊಳ್ಳುವುದು ಕಾಣಿಸಿ, "ಯಾಕೆ ಮಗ, ಬೇಸರವ? ಬಿಟ್ಟು ಹೋಗಬೇಕಂತಲ? ಅಥವಾ ಈ ಸಂಬಂಧ ನಿನಗೆ ಇಷ್ಟವಿಲ್ಲವ? ಏನು ಎಂತ ಬಾಯಿಬಿಡದಿದ್ದರೆ ನನಗೆ ಹೇಗೆ ತಿಳಿಯಬೇಕು?'– ಎಂದೆ. ಮಾತನಾಡಲಿಲ್ಲ. ಕಣ್ಣೆತ್ತಿಯೂ ನೋಡಲಿಲ್ಲ. ಇನ್ನಷ್ಟು ಬಿಕ್ಕಿದಳು ...... ವಿಚಿತ್ರ ಎಲ್ಲೂ ಇಲ್ಲದ್ದು ಎನ್ನುತ್ತ ಬಂದಳು ಇವಳು. ನನಗೆ ನಮ್ಮ ನಮ್ಮ ಸಂಬಂಧವೇ ವಿಚಿತ್ರ ಎನಿಸಿತು. ಯಾಕೆ ವಿಚಿತ್ರ? ತಿಳಿಯಲಿಲ್ಲ. 'ಅದಕ್ಕೆ ಮತ್ತೇನಿಲ್ಲ. ನೋಡಲಿಕ್ಕೆ ಬರುತ್ತಾರೆ ಅಂತ ಅಳು. ಅಲ್ಲ, ಇವಳನ್ನು ಮತ್ತೆ ಸಿನಿಮಾ ಥಿಯೇಟರಿನಲ್ಲಿ ತೋರಿಸಬೇಕ? ಇದೊಳ್ಳೆ ಕತೆಯಾಯಿತು. ನೋಡದೆ ಇವಳನ್ನು ಮದುವೆ ಆಗಲು ಅವನಿಗೆ ಪಳ್ಳ? ಇದಕ್ಕೆಲ್ಲ ಬೇಜಾರು ಮಾಡಿಕೊಂಡರೆ ಆಯಿತು. ಮದುವೆಗೆ ಮುಂಚೆ ನೂರು ಗಂಡಂದಿರು ಎಂತ ಹೇಳುತ್ತಾರಲ್ಲ. ಸುಮ್ಮನೆ ಹೇಳುತ್ತಾರಾ? ಇದೇ ಒಂದು ದೊಡ್ಡ ವಿಷಯವಾಯಿತು ಇವಳಿಗೆ"[೧೮]. ಇಲ್ಲಿ ಇಂದಿಯ ಮನಸ್ಸಿನ ನೋವು ಏನೆಂದು ಅರ್ಥಮಾಡಿಕೊಳ್ಳುವುದಕ್ಕೆ ಅಮ್ಮ ಹೋಗುವುದಿಲ್ಲ. ಅದರ ಬದಲಿಗೆ ಇನ್ನೂ ಹೆಚ್ಚು, ದುಃಖಕೊಡುತ್ತಾಳೆ. ಆದರೆ ಇಂದಿಯ ಮನಸ್ಸಿನ ನೋವು ಏನೆಂಬುದು ಅಪ್ಪನಿಗೆ ಸ್ವಲ್ಪ ಮಟ್ಟಿಗೆ ತಿಳಿದಿದ್ದರೂ ಕೂಡ ಸಮಧಾನ ಮಾಡುವ ಪ್ರಯತ್ನ ಮಾಡುತ್ತಾರೆ. ಹಾಗೇ ನೋಡಲು ಬಂದ ವರನ ತಾಯಿ ಇಂದಿಯನ್ನ "ಮನೆವಾರ್ತೆ ಬರುತ್ತದ? ಬಿ.ಎ. ಈ ವರ್ಷ ಮುಗಿಯಿತಂತೆ? ಅದೇನು ಅಷ್ಟು ತಡ? ಹಾಡಲು ಬರುತ್ತದ?... ಇಂದಿಯ ಎದುರು ಇವಳು ಉತ್ತರವಿತ್ತಳು.

'ಅವಳನ್ನು ಶಾಲೆಗೆ ಸೇರಿಸಿದ್ದೇ ತಡ. ಮತ್ತೆ ಎಸ್ಸೆಸೆಲ್ಲಿ ಪಬ್ಲಿಕ್ ಪರೀಕ್ಷೆ ಸಮಯದಲ್ಲಿಯೇ ಟೈಫಾಯಿಡ್ ಬಂದು ಪರೀಕ್ಷೆಗೆ ಹೋಗದೆ ಒಂದು ವರ್ಷ ಹಾಳಾಯಿತು. ಹೀಗೆ ಎರಡು ವರ್ಷ ತಡವಾಯಿತು. ಇಲ್ಲವಾದರೆ ಎಂದೋ ಮುಗಿಯುತ್ತಿತ್ತು. ಮನೆ ವಾರ್ತೆ ಕಲಿಸದೆ ಬಿಡುತ್ತೇನಾ ನಾನು? ನನಗೆ ಹೆಣ್ಣು ಮಕ್ಕಳು ಕೂತುಕೊಂಡರೆ ಆಗುವುದಿಲ್ಲ"[೧೯] ಹೀಗೆ ಇಂದಿಯನ್ನ ಕೇಳಿದ ಪ್ರಶ್ನೆಗೆ ತಾಯಿಯೇ ಉತ್ತರ ಕೊಟ್ಟು ಅವರು ಕೇಳಿದ ಹಾಡಿನ ಸುದ್ದಿಗೇ ಹೋಗದೆ ಮಾತನ್ನು ಮರೆಸಿ ಅವರ ಮಾತನ್ನು ಸುಮ್ಮನಾಗಿಸಿ ಬಿಡುತ್ತಾಳೆ.

ಇಲ್ಲೆಲ್ಲಾ ಇಂದಿ ಮೂಕ ಪ್ರಾಣಿಯಂತೆ ಸುಮ್ಮನಿರುತ್ತಾಳೆ. ಇಂದಿಯನ್ನ ನೋಡಲು ಬಂದ ಹುಡುಗ ಕೂಡ ಸುಮ್ಮನಿರುತ್ತಾನೆ. ಆದರೆ ಇಬ್ಬರ ತಾಯಿಂದಿರ ನಡುವೆ ಸಂವಾದ ನಡೆಯುತ್ತದೆ. ಇಲ್ಲಿ ಇಂದಿಯನ್ನ ಕೇಳಿದ ಪ್ರಶ್ನೆಗೆ ಆಕೆಯ ಅಮ್ಮನೇ ಉತ್ತರ ನೀಡುತ್ತಾಳೆ. ಒಟ್ಟಿನಲ್ಲಿ ಹೇಗಾದರೂ ಮಗಳನ್ನ ಮದುವೆಯಾಗಲು ಒಪ್ಪಿದರೆ ಸಾಕೆಂಬ ಆಸೆ. ಹೀಗೆ ನೋಡಿ ಹೋದ ಎಲ್ಲರ ಮನಸ್ಸಲ್ಲೂ ಆತಂಕ ಇದೆ. ಅವರನ್ನು ಕಳಿಸಿ ಬಂದ ಸುಬ್ಬಣ್ಣಯ್ಯನಿಗೆ ಕೂಡ ಆತಂಕ ಇದೆ. "ತಗ್ಗಿದ ದನಿಯಲ್ಲಿ ಅಂದರು. 'ಋಣಾನುಬಂಧ ಇದ್ದಂತೆ ಕಾಣುವುದಿಲ್ಲ. ಇವರೆ, ಹುಡುಗನ ತಾಯಿಗೆ ಹುಡುಗಿ ಅಷ್ಟು ಹಿಡಿಸಿದ ಹಾಗಿಲ್ಲ. ಅವನಿಗೆ ಹೇಗೋ. ನಾನು ಈಗಲೇ ಹೇಗೆ ಹೇಳುವುದು. ಮಾತಿನ ಮಟ್ಟು ನೋಡಿದರೆ ಅವರೆಲ್ಲ ಆ ಹೆಂಗಸು ಹೇಳಿದಂತೆಯೇ ಎಂತ ಕಾಣುತ್ತದೆ. ಹುಡುಗನ ತಾಯಿ ಮಾತನಾಡುವಾಗ ಕಂ ಕಿಂ ಅನ್ನಲಿಲ್ಲ. ಈಗಿನ ಮಕ್ಕಳು ಬೇಕಾದಲ್ಲಿ ಮಾತೇ ಆಡುವುದಿಲ್ಲ. ಬೇಡದಲ್ಲಿ ಬೇಕು ಸಾಕೆಂಬಷ್ಟು ಮಾತು"[೨೦]. ಇಲ್ಲಿ ವರ ಕೂಡ ತಾಯಿಯ ಮಾತನ್ನೇ ಕೇಳುವಂತದ್ದು. ಇಲ್ಲಿ ಸಂಪ್ರದಾಯವನ್ನು ಹೆಣ್ಣಿನ ಜೊತೆ ಗಂಡು ಕೂಡ ಒಪ್ಪಿಕೊಳ್ಳುವವನಾಗಿ ಈ ವರ ಕಂಡು ಬರುತ್ತಾನೆ. "ಪೂರಾ ಆಸೆ ಬಿಡುವುದು ಬೇಡ. ಈ ವಸ್ತು ಅವರದಾದರೆ ಬೇಡವೆಂದರೂ ಅವರನ್ನು ಸೇರದಿದ್ದೀತೆ?"[೨೧] ಎಂದು ಸುಬ್ಬಣ್ಣಯ್ಯ ಹೇಳುವ ಮಾತನ್ನು ಕೇಳಿ ಇಂದಿ ದು:ಖಿಸುತ್ತಾ ಮೂಲೆಯಲ್ಲಿ ಕೂರುತ್ತಾಳೆ. ಅದಕ್ಕೆ ಇಂದಿಯ ತಂದೆ "ಹತ್ತಿರ ಬಂದು ತಲೆ ನೇವರಿಸಿ 'ಯಾಕೆ ಮಗ? ಇಷ್ಟೆಕ್ಕೆಲ್ಲಾ ಅಳುವುದಾ? ಅದರಲ್ಲೇನಾಯಿತು?

ಅವ ನಿನ್ನ ಗಂಡನಲ್ಲ. ಆದ್ದರಿಂದ ಹೀಗೆ. ನಿನ್ನ ಗಂಡನಾಗುವವ ಬಂದರೆ ಒಪ್ಪಿಯೇ ಒಪ್ಪುತ್ತಾನೆ' ಎಂದೆ. ಅವಳ ಅಳು ಹೆಚ್ಚಿತು. 'ನನ್ನನ್ನು ನೋಡೀಗ. ನಿನ್ನ ಅಮ್ಮ ನಾನು ನೋಡಿದ ಇಪ್ಪತ್ತನೆಯ ಹುಡುಗಿ ಗೊತ್ತಿದೆಯ? ಬೇಕಾದ ವಸ್ತುವನ್ನು ಹುಡುಕಿದರೆ ಮಾತ್ರ ಅಲ್ಲವೆ ಅದು ಸಿಗುವುದು?' ಎಂದೆ"[೨೨].

ಈ ಮಾತಿಗೆ ಇಂದಿ ನನ್ನನ್ನು ಸುಟ್ಟು ಬಿಡುವಂತೆ ದುರುಗುಟ್ಟಿ ನೋಡಿದ ಹಾಗಾಯಿತು ಇಲ್ಲಿ ಅಪ್ಪ ಆಕೆಯನ್ನ ಸಮಾಧಾನ ಮಾಡಿದರೂ ಕೂಡ ಆಕೆಯ ಮನಸ್ಸನ್ನು ಅರ್ಥಮಾಡಿಕೊಳ್ಳುವುದರಲ್ಲಿ ಸೋಲುತ್ತಾರೆ. ಇಲ್ಲಿ ಇಂದಿಗೆ ಅಪ್ಪನ ಮಾತು ಕೇಳಿ ಸಿಟ್ಟು ಬರುತ್ತದೆ. ಆಂದರೆ ಅಪ್ಪ ಕೂಡ ಎಲ್ಲಾ ಗಂಡಸರಂತೆ ಅನೇಕ ಹುಡುಗಿಯನ್ನು ನೋಡಿ ಬಿಟ್ಟು ಬಂದವರು. ಆಕೆಗೆ ಒಂದು ಮಾರುಕಟ್ಟೆಯ ವಸ್ತುವನ್ನು ನೋಡುವಂತಹ ಈ ಸಂಪ್ರದಾಯನ್ನು ವಿರೋಧಿಸುವ ಧೈರ್ಯವಿಲ್ಲದೆ ಸುಮ್ಮನಾಗುತ್ತಾಳೆ. ಇಲ್ಲೆಲ್ಲಾ ಇಂದಿ ತನ್ನ ಮೂಕ ವೇದನೆಯನ್ನ ಕಣ್ಣೀರಿನ ಮೂಲಕ ವ್ಯಕ್ತಪಡಿಸುತ್ತಾಳೆ. ಈ ಕೆಟ್ಟ ಸಂಪ್ರದಾಯವನ್ನು ಒಪ್ಪಿಕೊಳ್ಳಲೇಬೇಕಾದ ಅನಿವಾರ್ಯತೆ ಆಕೆಗೆ. ಹಾಗಾಗಿ ಸುಮ್ಮನಾಗುತ್ತಾಳೆ.

ಈ ಬಗೆಯ ಮಾದರಿಗಳು ಹುಟ್ಟಿಕೊಳ್ಳಲು ಮುಖ್ಯ ಕಾರಣ ಸಮಾಜ. ಹೆಣ್ಣಿಗೆ ಶೋಷಣೆಯ ಅರಿವಿದ್ದರೂ ಶೋಷಿತ ಶಕ್ತಿಗಳ ವಿರುದ್ಧ ಹೋರಾಡಲು ಸಮೂಹ ಪ್ರಜ್ಞೆಗಳ ಬೆಂಬಲಿಸುವವರಿಲ್ಲ. ವ್ಯವಸ್ಥೆಯನ್ನು ಪ್ರಶ್ನಿಸಲು ಹೋದಾಗ ಬಜಾರಿ ಪಟ್ಟ ಬರುತ್ತದೆ ಕೃತಕ ಮುಖವಾಡ ಧರಿಸುವ ಗೋಜಿಗೆ ಹೋಗುವುದಿಲ್ಲ. ಮದುವೆ ಎಂಬ ಮಾರುಕಟ್ಟೆಯಲ್ಲಿ ಹೆಣ್ಣಿನ ಒಳಮನಸ್ಸನ್ನು ಅರ್ಥ ಮಾಡಿಕೊಳ್ಳಲು ಯಾರು ಹೋಗುವುದಿಲ್ಲ. ಎಲ್ಲರೂ ಅಜ್ಜ ನೆಟ್ಟ ಆಲಕ್ಕೆ ಜೋತು ಬಿಳುವವರೇ. ಮನುಷ್ಯ ಮತ್ತು ಪ್ರಾಣಿಗಳ ವ್ಯಾಪಾರದಲ್ಲಿ 'ಇಂದಿ'ಯ ಮೂಕ ವೇದನೆ ಅತ್ಯಂತ ಅಸಹನೀಯವಾದದು. ಆದರೂ ಅನಿವಾರ್ಯವೆಂಬಂತೆ ಕಥೆಯಲ್ಲಿ ಘಟನೆಗಳು ನಡೆಯುತ್ತವೆ. ಹೆಣ್ಣಿಗೆ ಮದುವೆ ಅನಿವಾರ್ಯವೇ? ಎಂಬ ಮೂಲಭೂತ ಪ್ರಶ್ನೆಯನ್ನು 'ಇಂದಿ' ಯಾದಿಯಾಗಿ ಯಾವ ಪಾತ್ರವೂ ಪ್ರಶ್ನಿಸುವುದಿಲ್ಲ. ಇದಕ್ಕೆ ಜಡ್ಡುಗಟ್ಟಿದ ಸಾಂಪ್ರದಾಯಿಕ ಸ್ಥಿರೀಕರಣಗೊಂಡ ಸಾಮಾಜಿಕ ಮೌಲ್ಯಗಳು ಕಾರಣ.

## ೫.೩ ಸಂಪ್ರದಾಯವನ್ನು ಪ್ರತಿರೋಧಿಸುವ ಮಾದರಿ

'ಅಂತರಂಗದ ಪುಟಗಳು' ಈ ಕತೆಯಲ್ಲಿ ಬರುವ ಅಚಲ ವಿದ್ಯಾವಂತೆ. ಆದರೆ ಇನ್ನೂ ಮದುವೆಯಾಗಿಲ್ಲ. ಅವಳ ಜೊತೆಗಿದ್ದವರ ಮದುವೆ ಆಗಿದೆ. ಹಾಗೇ ಆಕೆಯ ಗೆಳತಿ ಸರಿತ ಮದುವೆಯಾಗುತ್ತಿದ್ದೇನೆ ಎಂದಿದ್ದಕ್ಕೆ "ಇಷ್ಟು ಬೇಗ ಯಾಕೆ ಪುಣ್ಯಾತಗಿತ್ತಿ. ನೀನು ಹಳತಾದೆಯ?" ಎಂದರೆ 'ನನ್ನಪ್ಪ ಹಳತಾಗುತ್ತಿದ್ದಾರೆ ಹುಡುಗೀ'- ಎಂದಳು 'ಕಲಿಯಬೇಕಂತ ನನಗೂ ತುಂಬ ಆಸೆ ಉಂಟನ. ಆದರೆ ಅಮ್ಮ ಅಪ್ಪ ಹೇಳುವುದೂ ಸರಿಯೇ. ಹುಡುಗಿಯೊಟ್ಟಿಗೆ ಬೇರೆ ಏನೂ ಕೊಡಲಿಕ್ಕೆ ಆಗದಿದ್ದಂತಹ ಪರಿಸ್ಥಿತಿಯಲ್ಲಿ 'ಒಂದು ವರ್ಷ ಕಾದು ಬಾ'- ಎಂದರೆ ಅವ ಎಂತಹ ಭೂಪನೆ ಇರಲಿ, ಕಾಯುತ್ತಾನೆಯೇ?

ಅವ ಎಂತಹವನೇ ಇರಲಿ ಎಂದು ಸರಿತಾ ಒತ್ತಿ ಹೇಳಿದಳೇಕೆ? 'ಸರಿತಾ, ನೀನು ವ್ಯಾಪಾರಕ್ಕೆ ಹೊರಟಿದ್ದಿ. ಅಗ್ಗಕ್ಕೆ ಮಾಲು ಸಿಕ್ಕಾಗ ಗಪ್ಪಂತ ಹಿಡಿದುಕೊಳ್ಳುವವರಂತೆ. ಮದುವೆಯಾದರೆ ಎಂತಹವನನ್ನು ಗೊತ್ತುಂಟ? ಅವನನ್ನು ಒರಗಿದರೆ ಸಾಕು, ಆಹ! ಎನಿಸುವಂತಿರಬೇಕು"[೨೩]. ಇಲ್ಲಿ ಅಚಲಳಿಗೆ ತಾನು ಬಯಸಿದಂತಹ ಹುಡುಗ ಸಿಗದಿದ್ದರೆ ಮದುವೆಯಾಗುವುದಿಲ್ಲ ಎಂದು ಆಕೆ ಇನ್ನೂ ಮದುವೆಯಾಗಿಲ್ಲ. ಆದರೆ ಇಲ್ಲಿ ಸರಿತಳಿಗೆ ಓದಬೇಕೆಂಬ ಆಸೆ. ಆದರೆ ಅಪ್ಪ, ಅಮ್ಮನ ಕಷ್ಟವನ್ನ ಅರ್ಥಮಾಡಿಕೊಂಡು ಅವನು ಎಂಥವನಾದರೂ ಪರವಾಗಿಲ್ಲ ಎಂದು ಯೋಚಿಸಿ ಮದುವೆಗೆ ಒಪ್ಪುತ್ತಾಳೆ. ಇಲ್ಲಿ ಸರಿತಾಳಿಗೆ ಮದುವೆಯಾಗಲು ಮನಸ್ಸಿಲ್ಲದಿದ್ದರೂ ಕೂಡ ಪ್ರತಿರೋಧಿಸುವ ಧೈರ್ಯವಿಲ್ಲ. ಆದರೆ ಅಚಲ ತನಗೆ ಇಂಥವನೇ ಬೇಕು ಎಂದು ಹೇಳಿ ಬಂದ ವರಗಳನ್ನೆಲ್ಲಾ ತಿರಸ್ಕರಿಸಿ ಹಾಗೆಯೇ ಇರುತ್ತಾಳೆ. ಆಕೆಯೇ ಹೇಳುವಂತೆ "ಒಬ್ಬೊಬ್ಬರಾಗಿ ಹನ್ನೊಂದು ಜನ ನನ್ನನ್ನು ನೋಡಲು ಬಂದರು. ಹೋದರು. ಅವರು ಒಪ್ಪಿದರೂ ನಾನೊಪ್ಪಲಿಲ್ಲ. ಅವರು ಒಪ್ಪಿದರು ಎಂಬ ಕಾರಣಕ್ಕಲ್ಲ. ಯಾರ ಕಣ್ಣಲ್ಲಿಯೂ ದೀಪದ ಕಾಂತಿಯನ್ನು ನಾ ಕಾಣಲಿಲ್ಲ. ಇವನ ಮಗುವನ್ನು ನಾನು ಧರಿಸಬೇಕು ಎಂಬ ಅದಮ್ಯ ಇಚ್ಛೆ ಉಂಟಾಗಲಿಲ್ಲ"[೨೪]. ಹೀಗೆ ಈಕೆಗೆ ಯಾರು ಸಿಗದೆ ಮದುವೆಯಾಗದೆ ಸುಖವಿರಲಿಲ್ಲ. ಇಲ್ಲಿ ಇವರ ಮನೆಯ ಕೆಲಸದ ಸುಬ್ಬಿಯ ಚಿತ್ರಣ ಬರುತ್ತದೆ. ಆಕೆಯ ಬಗ್ಗೆ ಅಚಲ ಹೀಗೆ ಹೇಳುತ್ತಾಳೆ "ನಾನು ಯಾವ ಲೆಕ್ಕಕ್ಕೂ ಇಡದ ಸುಬ್ಬಿಯೂ ಈಗ ನನ್ನ ಲೆಕ್ಕದೊಳಗೆ ಸೇರುತ್ತಿದ್ದಾಳೆ. ಇಷ್ಟು ಸಣ್ಣ ಚಿಣ್ಣಿಯಿರುವಾಗ ಕೆಲಸಕ್ಕೆ ಬಂದು ಸೇರಿದ ಹೆಣ್ಣಿಗೆ ನೆಲಗುಡಿಸುತ್ತ, ಒರೆಸುತ್ತ, ಪಾತ್ರೆ ತಿಕ್ಕುತ್ತಲೆ ಇದ್ದಂತೆ ಪ್ರಾಯ ಬಂದಾಯಿತು. ಹರಾಮಿ ಬುದ್ಧಿ ಮಾಡಿ ಹೆತ್ತಾಯಿತು. ಇನ್ನೂ ಎಳೆ ಮಿಜರು. ಬರುವಾಗ ಮಗುವನ್ನು ಕರೆದುಕೊಂಡು ಬರುತ್ತದೆ. ಜಗಲಿಯ ಮೇಲೆ ಮಲಗಿಸುತ್ತದೆ. ಮದುವೆಯಾಗದೆ ಅದು ಹೆತ್ತದ್ದು ಊರಲ್ಲೊಂದು ರಾದ್ಧಾಂತವಾಗಲಿಲ್ಲ. ಅದರ ಸೋದರಮಾವ ಬೆನ್ನಮೇಲೆ ನಾಲ್ಕು ಗುಡುಂ ಗುಡುಂ ಗುದ್ದಿದ. ಗರ್ಭ ಉದುರಲಿಲ್ಲ. ಅಲ್ಲಿಗೆ ಮುಗಿಯಿತು. ಹೊಟ್ಟೆ ಹೊತ್ತುಕೊಂಡೇ ಕೆಲಸ ಮಾಡಿತು. ಭಾರ ಇಳಿಸಿದ ಹದಿನೈದೇ ದಿನಕ್ಕೆ ಮತ್ತೆ ಬಂದಾಯಿತು! ಎಲ್ಲವೂ ಒಂದು ಕೆಲಸದಂತೆಯೇ ನಡೆದು ಹೋಯಿತೆಂಬಂತೆ ಇದ್ದಾಳೆ ಸುಬ್ಬಿ ಸುಬ್ಬಿಯ ಧೈರ್ಯ ನನಗಿರಬೇಕೆಂಬ ಆಸೆಯುಂಟು, ಆದರೆ ಇಲ್ಲ. ಅದು ಬಿಟ್ಟು ಸುಬ್ಬಿಯನ್ನು ಒಮ್ಮೆ ಕರೆದು ಮೆಲ್ಲಗೆ ಅವಳ ಬಾಯಿಯಿಂದಲೇ ನಡೆದದ್ದನ್ನೆಲ್ಲ ಕೇಳಬೇಕೆನಿಸಿದರೂ ಕೇಳಲು ನನ್ನಿಂದ ಯಾಕೆ ಆಗುತ್ತಿಲ್ಲ?"[೨೫] ಹೀಗೆಲ್ಲಾ ಯೋಚಿಸುತ್ತಾಳೆ. ಅದರಂತೆ ಇಲ್ಲಿ ಅಚಲಳಿಗೆ ಎಲ್ಲಾ ಬಯಕೆಗಳು ಇವೆ. ಸುಬ್ಬಿಯ ತರ ಸುಖ ಪಡೆಯಬೇಕೆಂಬ ಇಚ್ಛೆ ಇದೆ. ಆದರೆ ಆ ಧೈರ್ಯ ಇಲ್ಲ. ಇಲ್ಲಿ ಅಚಲಳಿಗೆ ಸಂಪ್ರದಾಯ ಅಡ್ಡಿ ಆಗಿದೆ. ಆದರೆ ಮದುವೆಯಾಗದೇ ಸಂಪ್ರದಾಯವನ್ನು ಮೀರುವ ಪ್ರಯತ್ನ ಮಾಡಿದರೂ ಕೂಡ ಸುಬ್ಬಿಯಂತೆ

ಮದುವೆಯಾಗದೇ ಸುಖಪಡೆಯುವ ಧೈರ್ಯ ಮಾಡುವುದಿಲ್ಲ. ಆದರೆ ಇಲ್ಲಿ ಅಚಲಳ ಗೆಳತಿ ಮಂಜುಳಳ ಸಂಬಂಧವನ್ನ ಸರಿತ ಅಚಲಳೊಂದಿಗೆ ಹೀಗೆ ಹೇಳುತ್ತಾಳೆ. "ಅವಳು ಗಂಡ ಇದ್ದ ಹಾಗೆಯೇ ಬೇರೊಬ್ಬನ ಜೊತೆ ಮಲಗಿದ್ದಳಂತೆ. 'ಗಂಡನೊಟ್ಟಿಗೆ ಸೂಳೆಗಾರಿಕೆ ಮಾಡುತ್ತಿದ್ದೆ, ಇವನೊಟ್ಟಿಗೆ ಮಲಗಿದಾಗ ಬದುಕುತ್ತಿದ್ದೇನೆ ಎನಿಸಿತು'- ಎಂದಳು! ನನಗೆ ಎದೆ ಧಡ್! ಯಾಕೆ ಹಾಗೆ ಮಾಡಿದೆ ಎಂದರೆ ಹೊದಿಕೆ, ಯಾಚೆಗೆ ಎಳೆದರೂ ಸರಿಯಾಗದೆ ಚೋಟಿದ್ದರೆ, ಬೇರೊಂದು ಹೊದಿಕೆಯನ್ನು ಹೊರೆಯುವುದೇ ಮತ್ತೆ. ಚಳಿಯಲ್ಲಿ ಸಾಯುವುದ?"[೨೬] ಎಂದಳಂತೆ. ಹೀಗೆ ಮಂಜು ಕೂಡ ತನ್ನ ಗಂಡನೊಂದಿಗೆ ಸುಖ ಪಡೆಯಲಾಗದೆ ಬೇರೊಬ್ಬನೊಂದಿಗೆ ಅನೈತಿಕ ಸಂಬಂಧ ಇಟ್ಟುಕೊಂಡು, ಅದರಿಂದ ತೃಪ್ತಿ ಪಡೆಯುತ್ತಾಳೆ. ಅಚಲಳ ಜೊತೆಗಿದ್ದ ಎಲ್ಲರಿಗೂ ಮದುವೆಯಾಗಿ ಮಕ್ಕಳಾದರೂ ಕೂಡ ಈಕೆಗೆ ಬೇಕಾಗಿದ್ದ ವರ ಸಿಗದೆ ಮದುವೆಯಾಗಿಲ್ಲ. ಹೀಗೆ ಇದ್ದಾಗ ಒಂದು ದಿನ ಪುಟ್ಟತ್ತೆಯ ಮಗ ವೆಂಕಟು ಮನೆಗೆ ಬರುತ್ತಾನೆ. ಬಂದು ಅಚಲಳೊಂದಿಗೆ ತನ್ನ ಬಗ್ಗೆ ಹೇಳಿಕೊಳ್ಳುತ್ತಾನೆ. "ಕೆಲಸದಲ್ಲಿ ಒಂದು ನೆಲೆಗೆ ಬಂದು ನಿಂತಾಯಿತು. ಬಾಡಿಗೆಗೆ ಮನೆ ಮಾಡಿಯಾಯಿತು. ಬೇಕೆಂದರೆ ಸೈಟಿದೆ ಮುಂದೆ ಸ್ವಂತ ಮನೆ ಕಟ್ಟಬೇಕೆಂಬ ಆಸೆಯುಂಟು. ಪಾತ್ರ ಪರಡಿ, ಡೈನಿಂಗ್ ಟೇಬಲ್, ಫ್ಯಾನ್, ಕಬ್ಬಿಣದ ಬೀರು, ಫ್ರಿಜ್, ಮಿಕ್ಸರ್, ಹಾಟ್‌ಪ್ಲೇಟ್- ಎಲ್ಲ ರೆಡಿ. ಬರುವವಳಿಗೆ ಚಿನ್ನ ಕೂಡ ಮಾಡಿಸಿಟ್ಟಾಯಿತು. ಮದುವೆಯಾಗುವುದರೊಳಗೆ ಎಲ್ಲ ಮಾಡಿಡಬೇಕೆಂಬ ಹಟ. ಮುಂದೆ ಮಾಡುತ್ತೇನೆಂದರೆ ಅದು ಸುಳ್ಳೇ. ಏನು ಹೇಳುತ್ತೀ ಅಚಲ?"[೨೭] ಆದರೂ ಅಚಲಳಿಗೆ ಏನೂ ಅನಿಸಿಲ್ಲ. ಕೊನೆಗೆ ಆತನೇ "ಮದುವೆಯಾದರೆ ಅಚಲ, ನಿನ್ನಂತಹ ಹುಡುಗಿಯನ್ನ"[೨೮] ಎಂಬುದಾಗಿ ಹೇಳುತ್ತಾನೆ. ಆಗ ಅಚಲ 'ಅಂತೂ, ನಿನಗೊಂದು ಹುಡುಗಿಬೇಕು. ಫ್ಯಾನ್, ಫ್ರಿಜ್, ಟೇಬಲ್, ಪಾತ್ರಪರಡಿ, ಸೈಟು-ಇತ್ಯಾದಿಗಳಂತೆ .... ಅಲ್ಲ?"[೨೯] ಎಂಬುದಾಗಿ ಕೇಳುತ್ತಾನೆ. ಅಂದರೆ ಅಚಲಳಿಗೆ ಮಾರುಕಟ್ಟೆಯ ವಸ್ತುವನ್ನು ಕೊಂಡಂತೆ ಮದುವೆಯೂ ಕೂಡ ಎಂಬಂತ ಭಾವನೆ ಇರುತ್ತದೆ. ಆದರೆ ವೆಂಕಟು ಇದ್ದಷ್ಟು ಹೊತ್ತು ಆಕೆಯ ಮನಸ್ಸಲ್ಲಿ ಯಾರೋ ಇದ್ದರು "ಯಾರೆಂತ ನೋಡಿದರೆ ಅಲ್ಲಿ ನಾನಿದುವರೆಗೆ ನೋಡಿರದ, ಮಂಜುಳ ಗಂಡನನ್ನು ಧಿಕ್ಕರಿಸಿ ಮಲಗಲು ಆರಿಸಿಕೊಂಡ ಅವಳ ಗಂಡನಲ್ಲದವನಿದ್ದ"[೩೦] ಇಲ್ಲಿ ಅಚಲ ಕೂಡ ಒಂದು ರೀತಿಯಲ್ಲಿ ಸಂಪ್ರದಾಯವನ್ನು ಪ್ರತಿರೋಧಿಸುವ ಹೆಣ್ಣಾಗಿ ಕಂಡು ಬರುತ್ತಾಳೆ.

'ಒಂದು ಬಾಗಿಲ ಸದ್ದು' ಕತೆಯಲ್ಲಿ ಸ್ತ್ರೀ ಪ್ರತಿರೋಧನೆ ಕಂಡು ಬರುತ್ತದೆ. ಇಲ್ಲಿ ನಿರೂಪಕಿ ಸಾಲಿಗ್ರಾಮ ಶಿಲೆಯನ್ನು ಮುಟ್ಟುವ ಮೂಲಕ ತನ್ನ ಪ್ರತಿಭಟನೆಯನ್ನು ತೋರಿಸುತ್ತಾರೆ. ಮನೆಯ ಗಂಡಸರು ಸ್ತ್ರೀಯನ್ನು ಅಪಶಕುನ ಎಂಬಂತೆ ಕಾಣುತ್ತಿದ್ದ ದಿನದಲ್ಲಿ ನಿರೂಪಕಿ ಚಿಕ್ಕವರಾಗಿದ್ದರು. ಆಗ ಮನೆಯಲ್ಲಿ

ಸಾಲಿಗ್ರಾಮ ಶಿಲೆಯನ್ನು ಮನೆಯ ದೇವರ ಕೋಣೆಯಲ್ಲಿ ಇಟ್ಟಿದ್ದರು. ಆ ದೇವರ ಕೋಣೆಯೊಳಗೆ ಹೆಣ್ಣುಮಕ್ಕಳು ಹೋಗಿ ಬಾಗಿಲು ಹಾಕಿಕೊಳ್ಳುವುದು ತಪ್ಪು. ಅದರಲ್ಲೂ ಆ ಸಾಲಿಗ್ರಾಮಶಿಲೆಯನ್ನು ಯಾರೂ ಮುಟ್ಟುವಂತಿರಲಿಲ್ಲ. ಆಗಲೇ ಅವರಿಗೆ ಸಾಲಿಗ್ರಾಮ ಶಿಲೆಯನ್ನು ಮುಟ್ಟಬೇಕೆಂಬ ಆಸೆ. ಆದರೆ ಅಷ್ಟು ಧೈರ್ಯವಿರಲಿಲ್ಲ. "ಎಲ್ಲ ಬಿಟ್ಟು ದೇವರ ಕೋಣೆ ಬಾಗಿಲು ಹಾಕಿಕೊಳ್ಳಲು ಈ ಮುಂಚೆ ಎಷ್ಟು ಹೆದರುತ್ತಿದ್ದೆ. ಹೆಣ್ಣು ಮಕ್ಕಳು ಹಾಗೆಲ್ಲ ಸುಮ್ಮಸುಮ್ಮನೆ ಬಾಗಿಲು ಹಾಕಿಕೊಳ್ಳುವಂತಿಲ್ಲವಲ್ಲ. ಆದರೆ ಈಗ ಈ ಹಿಂಜರಿಕೆ ನನಗಿಲ್ಲ"[೩೧]. ಮೊದಲು ನಿರೂಪಕಿ ದೇವರ ಕೋಣೆ ಬಾಗಿಲು ಹಾಕಿಕೊಳ್ಳಲೂ ಭಯ ಪಡುತ್ತಿದ್ದವರು, ಈಗ ದೊಡ್ಡವರಾದ ಮೇಲೆ ಆ ಭಯವಿರಲಿಲ್ಲ. ಮೊದಲು ಬಾಗಿಲು ಹಾಕಿದರೆ ಏನೋ ಬಾಗಿಲು ಸದ್ದಾದಂತೆ ಕೇಳುತ್ತಿತ್ತು. ಆದರೆ ಈಗ ಹಾಗಿಲ್ಲ. ಧೈರ್ಯದಿಂದ ದೇವರ ಕೋಣೇ ಬಾಗಿಲು ಹಾಕಿ ಸಾಲಿಗ್ರಾಮ ಶಿಲೆಯನ್ನು ಮುಟ್ಟುತ್ತಾರೆ. ಆದರೆ ಹಿರಿಯರು ಹೇಳಿದಂತೆ ಮುಟ್ಟಿದರೆ ಏನಾದರೂ ತೊಂದರೆಯಾಗುತ್ತದೆ ಎಂಬುದನ್ನು ಬದಲಾಯಿಸುತ್ತಾರೆ. ಅವರು ಚಿಕ್ಕದಲ್ಲಿದ್ದಾಗ ಅವರ ಮನಸ್ಸಲ್ಲಿದ್ದಂತಹ ಭಾವನೆಗಳು ಅಂದರೆ "ಪೂಜೆಯ ಬಗ್ಗೆ ನನ್ನ ಕಲ್ಪನೆಯಲ್ಲಿ ತಪ್ಪು ಬೆರೆತು ಹೋಗಿತ್ತು. ಆತಂಕ ಹರಡಿ ಬಿಟ್ಟಿತ್ತು. ಅದೆಲ್ಲ ಹೊರಟುಹೋಯಿತು. ಪೂಜೆಯಲ್ಲಿ ಯಾರು ಸಣ್ಣ ಯಾರು ದೊಡ್ಡ ಇಲ್ಲ. ಸತಿ–ಪತಿ ಇಲ್ಲ. ಹೆಣ್ಣು–ಗಂಡು, ಶೂದ್ರ–ಬ್ರಾಹ್ಮಣ ಮುಂತಾದ್ದಿಲ್ಲ. ಮುಗಿಯದ ಧೂಪ ದೀಪ ನೈವೇದ್ಯ ಆರತಿ ಗಂಟೆ ಜಾಗಂಟೆ ಶಂಖ ಇಷ್ಟೇ ಮತ್ತು ಇದೇ ಅಲ್ಲ"[೩೨]. ಹೀಗೆ ಪೂಜೆಯ ಬಗ್ಗೆ ಬ್ರಾಹ್ಮಣರು ಹೇಳುವಂತಹ ಮಡಿ–ಮೈಲಿಗೆಯನ್ನು ಪ್ರತಿಭಟಿಸುತ್ತಾರೆ. ಹಾಗೇ ಪುಟ್ಟ ಸಾಲಿಗ್ರಾಮ ಶಿಲೆಯನ್ನು ಯಾಕೆ ಹೆಂಗಸರು ಮಾತ್ರ ಮುಟ್ಟಬಾರದು, ಮುಟ್ಟಿದರೆ ಏನಾಗುತ್ತದೆ ಎಂದು ಯೋಚಿಸುತ್ತಿದ್ದ ನಿರೂಪಕಿ ಒಂದು ದಿನ ಬಾಗಿಲು ಹಾಕಿ ಮುಟ್ಟಿಯೇ ಬಿಡುತ್ತಾರೆ. ಹೀಗೆ ಮಟ್ಟಿದ ನಿರೂಪಕಿ ಮೊದಲು ಭ್ರಮೆಗೆ ಒಳಗಾಗುತ್ತಾರೆ. "ಬಾಗಿಲು ತಟ್ಟುತ್ತಿದ್ದಾರೆ ಮೇಲೆ ಮೇಲೆ ಮತ್ತೆ ಮತ್ತೆ ಯಾರೋ. ನಡುಗುತ್ತಿತ್ತು ಮೈ. ನಾನೀ ಸಂಪುಟವನ್ನು ತೆರೆಯಬಾರದಿತ್ತು. ತಲತಲಾಂತರದಿಂದ ಬಂದ ಗೂಡಿನ ಮಡಿ ಹಾರಿಸಿದೆ. ಅಶುದ್ಧ ಮಾಡಿದೆ. ಈಗ ಬಾಗಿಲು ತೆರೆದೆನೆಂದರೆ, ಹೊರಗಿರುವ ಎಲ್ಲರೂ ಹೇಳುತ್ತಾರೆ, ಸಾಲಿಗ್ರಾಮ ಶಿಲೆಯನ್ನು ಈ 'ಹೆಂಗಸು' ಮುಟ್ಟಿಯೇ 'ಬಿಟ್ಟಿದೆ' ಅಂತ. ಶುದ್ಧ, ಪಂಚಗವ್ಯ ... ಎಲ್ಲ ಇಷ್ಟಕ್ಕೇ ಮುಗಿಯುವುದಿಲ್ಲ"[೩೩]. ಹೀಗೆ ಭ್ರಮೆಗೊಳಗಾದ ನಿರೂಪಕಿಗೆ ನಂತರ ಏನೂ ಆಗಿಲ್ಲ, ಯಾರಿಗೂ ತಿಳಿದಿಲ್ಲ ಎಂದು ಗೊತ್ತಾಗುತ್ತದೆ. ಮತ್ತೆ ತಾನು ಮುಟ್ಟಿದ್ದರಿಂದ ಏನೂ ಅಶುದ್ಧ ಆಗಿಲ್ಲ. ಹಾಗೂ ಏನೂ ತೊಂದರೆ ಆಗಿಲ್ಲ ಎಂದು ಗೊತ್ತಾಗುತ್ತದೆ. ಇಲ್ಲಿ ನಿರೂಪಕಿ ಬ್ರಾಹ್ಮಣ ಕುಟುಂಬಕ್ಕೆ ಸೇರಿದವರು. ಮಡಿ–ಮೈಲಿಗೆ ಹೆಚ್ಚು. ಹೆಂಗಸರು ಮುಟ್ಟಿದರೆ ಅಶುದ್ಧವಾದಿತು ಎಂಬ ಭಾವನೆ ಗಂಡಸರಿಗೆ. ಹಾಗಾಗಿ ಸಾಲಿಗ್ರಾಮ ಶಿಲೆಯನ್ನು ಮುಟ್ಟಿದರೆ ಅದು

ಅಶುದ್ಧವಾದರೆ ಏನಾದರೂ ಅನಾಹುತವಾಗುತ್ತದೆ ಎಂದು ಹೆದರಿಸಿದ್ದರು. ಆದರೆ ನಿರೂಪಕಿ ಅದನ್ನು ಧೈರ್ಯದಿಂದ ಮುಟ್ಟುವ ಮೂಲಕ ತನ್ನ ಮನಸ್ಸಲ್ಲಿದ್ದ ಭಯದ ಕಲ್ಪನೆಯನ್ನ ದೂರಮಾಡಿಕೊಳ್ಳುತ್ತಾರೆ. ಗಂಡು-ಹೆಣ್ಣು ಎಲ್ಲರೂ ಒಂದೇ ಎಂಬ ಭಾವನೆಯನ್ನ ತಂದುಕೊಳ್ಳುತ್ತಾರೆ.

ಈ ರೀತಿಯಲ್ಲಿ ಹೆಣ್ಣು ಸಂಪ್ರದಾಯವನ್ನು ಒಪ್ಪುವ ಹಾಗೂ ಸಂಪ್ರದಾಯವನ್ನು ವಿರೋಧಿಸುವ ನೆಲೆಯನ್ನು ಕಾಣಬಹುದಾಗಿದೆ.

# ಸಂದರ್ಭಸೂಚಿ

| | | | |
|---|---|---|---|
| ೧. ಅಲೆಗಳಲ್ಲಿ ಅಂತರಂಗ | : | ವೈದೇಹಿ ; ಪು: ೭೭; | ೨೦೦೫ |
| ೨. ಅಲೆಗಳಲ್ಲಿ ಅಂತರಂಗ | : | ವೈದೇಹಿ ; ಪು: ೭೭; | ೨೦೦೫ |
| ೩. ಅಲೆಗಳಲ್ಲಿ ಅಂತರಂಗ | : | ವೈದೇಹಿ ; ಪು: ೭೭; | ೨೦೦೫ |
| ೪. ಅಲೆಗಳಲ್ಲಿ ಅಂತರಂಗ | : | ವೈದೇಹಿ ; ಪು: ೭೭–೭೮; | ೨೦೦೫ |
| ೫. ಅಲೆಗಳಲ್ಲಿ ಅಂತರಂಗ | : | ವೈದೇಹಿ ; ಪು: ೭೮; | ೨೦೦೫ |
| ೬. ಅಲೆಗಳಲ್ಲಿ ಅಂತರಂಗ | : | ವೈದೇಹಿ ; ಪು: ೭೮; | ೨೦೦೫ |
| ೭. ಅಲೆಗಳಲ್ಲಿ ಅಂತರಂಗ | : | ವೈದೇಹಿ ; ಪು: ೭೮; | ೨೦೦೫ |
| ೮. ಅಲೆಗಳಲ್ಲಿ ಅಂತರಂಗ | : | ವೈದೇಹಿ ; ಪು: ೭೮; | ೨೦೦೫ |
| ೯. ಅಲೆಗಳಲ್ಲಿ ಅಂತರಂಗ | : | ವೈದೇಹಿ ; ಪು: ೭೮; | ೨೦೦೫ |
| ೧೦. ಅಲೆಗಳಲ್ಲಿ ಅಂತರಂಗ | : | ವೈದೇಹಿ ; ಪು: ೭೮; | ೨೦೦೫ |
| ೧೧. ಅಲೆಗಳಲ್ಲಿ ಅಂತರಂಗ | : | ವೈದೇಹಿ ; ಪು: ೭೯; | ೨೦೦೫ |
| ೧೨. ಅಲೆಗಳಲ್ಲಿ ಅಂತರಂಗ | : | ವೈದೇಹಿ ; ಪು: ೮೧; | ೨೦೦೫ |
| ೧೩. ಅಲೆಗಳಲ್ಲಿ ಅಂತರಂಗ | : | ವೈದೇಹಿ ; ಪು: ೮೧; | ೨೦೦೫ |
| ೧೪. ಅಲೆಗಳಲ್ಲಿ ಅಂತರಂಗ | : | ವೈದೇಹಿ ; ಪು: ೮೧; | ೨೦೦೫ |
| ೧೫. ಅಲೆಗಳಲ್ಲಿ ಅಂತರಂಗ | : | ವೈದೇಹಿ ; ಪು: ೧೦೬; | ೨೦೦೫ |
| ೧೬. ಅಲೆಗಳಲ್ಲಿ ಅಂತರಂಗ | : | ವೈದೇಹಿ ; ಪು: ೧೦೬; | ೨೦೦೫ |
| ೧೭. ಅಲೆಗಳಲ್ಲಿ ಅಂತರಂಗ | : | ವೈದೇಹಿ ; ಪು: ೧೦೮; | ೨೦೦೫ |
| ೧೮. ಅಲೆಗಳಲ್ಲಿ ಅಂತರಂಗ | : | ವೈದೇಹಿ ; ಪು: ೧೦೮–೧೦೯; | ೨೦೦೫ |
| ೧೯. ಅಲೆಗಳಲ್ಲಿ ಅಂತರಂಗ | : | ವೈದೇಹಿ ; ಪು: ೧೦೯; | ೨೦೦೫ |
| ೨೦. ಅಲೆಗಳಲ್ಲಿ ಅಂತರಂಗ | : | ವೈದೇಹಿ ; ಪು: ೧೦೯; | ೨೦೦೫ |
| ೨೧. ಅಲೆಗಳಲ್ಲಿ ಅಂತರಂಗ | : | ವೈದೇಹಿ ; ಪು: ೧೧೦; | ೨೦೦೫ |
| ೨೨. ಅಲೆಗಳಲ್ಲಿ ಅಂತರಂಗ | : | ವೈದೇಹಿ ; ಪು: ೧೧೦; | ೨೦೦೫ |
| ೨೩. ಅಲೆಗಳಲ್ಲಿ ಅಂತರಂಗ | : | ವೈದೇಹಿ ; ಪು: ೨೨೧; | ೨೦೦೫ |

೨೪. ಅಲೆಗಳಲ್ಲಿ ಅಂತರಂಗ : ವೈದೇಹಿ ; ಪು: ೨೨೨-೨೨೩; ೨೦೦೫

೨೫. ಅಲೆಗಳಲ್ಲಿ ಅಂತರಂಗ : ವೈದೇಹಿ ; ಪು: ೨೨೪; ೨೦೦೫

೨೬. ಅಲೆಗಳಲ್ಲಿ ಅಂತರಂಗ : ವೈದೇಹಿ ; ಪು: ೨೨೬; ೨೦೦೫

೨೭. ಅಲೆಗಳಲ್ಲಿ ಅಂತರಂಗ : ವೈದೇಹಿ ; ಪು: ೨೨೭; ೨೦೦೫

೨೮. ಅಲೆಗಳಲ್ಲಿ ಅಂತರಂಗ : ವೈದೇಹಿ ; ಪು: ೨೨೭; ೨೦೦೫

೨೯. ಅಲೆಗಳಲ್ಲಿ ಅಂತರಂಗ : ವೈದೇಹಿ ; ಪು: ೨೨೮; ೨೦೦೫

೩೦. ಅಲೆಗಳಲ್ಲಿ ಅಂತರಂಗ : ವೈದೇಹಿ ; ಪು: ೨೨೮; ೨೦೦೫

೩೧. ಅಲೆಗಳಲ್ಲಿ ಅಂತರಂಗ : ವೈದೇಹಿ ; ಪು: ೪೯೮; ೨೦೦೫

೩೨. ಅಲೆಗಳಲ್ಲಿ ಅಂತರಂಗ : ವೈದೇಹಿ ; ಪು: ೪೯೮; ೨೦೦೫

೩೩. ಅಲೆಗಳಲ್ಲಿ ಅಂತರಂಗ : ವೈದೇಹಿ ; ಪು: ೫೦೧; ೨೦೦೫

# ೬: ವೈದೇಹಿಯವರ ಕತೆಗಳಲ್ಲಿ ಸ್ತ್ರೀ ಪರಿವರ್ತನೆ ಚಿತ್ರಣ.

## ೬.೧ ಪ್ರಸ್ತಾವನೆ

ಪರಿವರ್ತನೆ ಎನ್ನುವುದು ಒಂದು ಸಮುದಾಯದ ಒಳಗೆ ಅಥವಾ ಕುಟುಂಬದ ಒಳಗೆ ನಿರಂತರವಾಗಿ ನಡೆಯುತ್ತಿರುತ್ತದೆ. ವೈದೇಹಿ ಕತೆಗಳು ಕುಟುಂಬದ ಒಳಗಿನ ಬದಲಾವಣೆಗಳನ್ನು ಸೂಕ್ಷ್ಮವಾಗಿ ಗ್ರಹಿಸಿ ದಾಖಲು ಮಾಡುತ್ತವೆ. ಹಾಗಾಗಿ ಹೆಣ್ಣಿಗೂ ಒದಗಿಬರುವ ಆರ್ಥಿಕ ಸ್ವಾವಲಂಬನೆಯ ಹೊಸದಾರಿಗಳನ್ನು ಕತೆಗಳಲ್ಲಿ ನಿರೂಪಿಸುದ್ದಾರೆ. ಇಂತಹ ಸ್ವಾವಲಂಬನೆಯ ದಾರಿಯನ್ನು ತುಳಿದಾಗ, ಹೆಣ್ಣು ಎದುರಿಸುವ ಸಂಕಟಗಳನ್ನು ಸಮಾಜದ ಕೊಂಕುಗಳನ್ನು ಕೂಡ ಕತೆಗಳಲ್ಲಿ ನೋಡಬಹುದಾಗಿದೆ. ಹೀಗೆ ವೈದೇಹಿ ಕತೆಗಳು ಚಿತ್ರಿಸುವ 'ಸ್ತ್ರೀ ಪರಿವರ್ತನೆಯ ಚಿತ್ರಣ'ವನ್ನು ಈ ಅಧ್ಯಾಯದಲ್ಲಿ ವಿಮರ್ಶೆಗೆ ಒಳಪಡಿಸಲಾಗಿದೆ.

## ೬.೨. ಆರ್ಥಿಕ ಸ್ವಾವಲಂಬನೆಯ ಕಡೆಗೆ ಚಲನೆ

'ಗುಲಾಬಿ ಟಾಕೀಸು ಮತ್ತು ಸಣ್ಣ ಅಲೆಗಳು' ಕತೆಯಲ್ಲಿ ಆಧುನಿಕತೆಗೆ ತೆರೆದುಕೊಳ್ಳುತ್ತಿರುವ ಸ್ತ್ರೀಯರ ಚಿತ್ರಣವನ್ನು ಕಾಣಬಹುದು. ಈ ಕತೆಯಲ್ಲಿ ಬರುವ ಗುಲಾಬಿ ಟಾಕೀಸು ಕಟ್ಟಿಸುವ ಮೂಲಕ ಹಳ್ಳಿಗೆ ನಾಗರಿಕತೆ ಪ್ರವೇಶಿಸುವುದಕ್ಕೆ ಕಾರಣಳಾಗುತ್ತಾಳೆ. ಮೊದಲಿಂದಲೂ ಶ್ರೀಮಂತೆಯಾಗಬೇಕೆಂಬ ಆಸೆಯಿದ್ದ ಸೂಲಗಿತ್ತಿ ಲಿಲ್ಲೀಬಾಯಿ ಟಾಕೀಸಿನಲ್ಲಿ ಹೆಂಗಸರ ಗೇಟ್‌ಕೀಪರ್ ಆಗಿ ಕೆಲಸ ಮಾಡುವ ಮೂಲಕ ಆರ್ಥಿಕ ಸ್ವಾವಲಂಬಿಯಾಗಿ ಬದುಕುವುದಕ್ಕೆ ತೊಡಗುತ್ತಾಳೆ. ಲಿಲ್ಲೀಬಾಯಿಯ ಗಂಡ ಮುಂಬಯಿಗೆ ಓಡಿಹೋದರೂ ಹೆದರದೆ ತನ್ನ ಕಾಲ ಮೇಲೆ ತಾನು ನಿಂತು ಸ್ವತಂತ್ರಳಾಗಿ ಬದುಕು ನಡೆಸುವ ದಿಟ್ಟ ಹೆಣ್ಣಾಗಿ ಕಂಡು ಬರುತ್ತಾಳೆ. ಲಿಲ್ಲೀಬಾಯಿ ಟಾಕೀಸಿನ ಗೇಟ್ ಕೀಪರ್ ಆಗಿ ಕೆಲಸಕ್ಕೆ ಸೇರಿದ ಮೇಲೆ ಎಲ್ಲಾ ಹೆಂಗಸರು ಕೂಡ ಟಾಕೀಸಿಗೆ ಬರಲು ತೊಡಗುತ್ತಾರೆ. "ಅದು ಬೈತಲೆಯಂತೆ ಒಂದೇ ರಸ್ತೆಯಿರುವ ಊರು. ಒಂದಷ್ಟು ದೊಡ್ಡವರ ಮನೆಗಳು. ಮತ್ತೊಂದಷ್ಟು ಸಣ್ಣ ಮನೆಗಳು, ಒಂದು ಊರೆನಿಸಿಕೊಳ್ಳಲು ಏನೆಲ್ಲ ಬೇಕೋ ಅದೆಲ್ಲ–ಅಂಗಡಿ ಮುಂಗಟ್ಟು, ಸರಕಾರಿ ಆಫೀಸು, ಸಣ್ಣಶಾಲೆ, ಒಂದು ಬಸ್‌ಸ್ಟ್ಯಾಂಡ್, ದೇವದಾರು, ಧೂಪ ಮತ್ತು ಗಾಳಿ ಮರಗಳು ಇತ್ಯಾದಿ ಇತ್ಯಾದಿ.

ಊರಿಗೊಂದು ಬಯಲಿತ್ತು. ಸಂಜೆ ಹೊತ್ತು ಗಂಡಸರು ವಾಕಿಂಗ್ ಹೋಗಿ ಕುಳಿತುಕೊಳ್ಳುವ ಜಾಗೆಯಾಗಿತ್ತು ಅದು"[೧]. ಅಲ್ಲಿ ಎಲ್ಲಾ ವಿಷಯಗಳ ಕುರಿತು ಚರ್ಚೆ ನಡೆಯುತ್ತಿತ್ತು. ಆದರೆ ಆ ಬಯಲಿಗೆ ಹೆಂಗಸರು ಹೋಗುತ್ತಿರಲಿಲ್ಲ. ಗಂಡಸರು ಜೊತೆಗಿಲ್ಲದೆ ಮನೆಯಿಂದ ರಸ್ತೆಗೆ ಇಳಿಯುತ್ತಿರಲಿಲ್ಲ. ಹೆಂಗಸರು ಮನೆಯಲ್ಲಿಯೇ ಸುಖ, ಸಂತೋಷವನ್ನು ಕಾಣುತ್ತಿದ್ದರು.

'ಸಂಜೆ ಹೊತ್ತಿನಲ್ಲಿ ಮಕ್ಕಳನ್ನು ಆಟಕ್ಕೆ ಕಳಿಸಿ ತಲೆ ಬಾಚಿಕೊಂಡು, ಹಣೆಗಿಟ್ಟುಕೊಂಡು, ಸಂಜೆಮಲ್ಲಿಗೆ ದಂಡೆಯನ್ನೋ, ಸುರುಳಿ ಹೂವಿನ ದಂಡೆಯನ್ನೋ ಮುಡಿಗೇರಿಸಿಕೊಂಡು ಸ್ವಲ್ಪ ಸುಧಾರಿಸಿಕೊಂಡಿರುತ್ತಿದ್ದರು. ಅಥವಾ ನಾಳೆಯ ಕಡುಬಿಗೆ ಕೊಟ್ಟೆ ಸೆಡುತ್ತಲೋ, ಅಕ್ಕಿ-ಉದ್ದು ಅರೆಯುತ್ತಲೋ. ಹೂ ಕಟ್ಟುತ್ತಲೋ ಇರುತ್ತಿದ್ದರು. ಸೂರ್ಯ ಕಂತಿದೊಡನೆ ದೇವರಿಗೆ ದೀಪ ಹಚ್ಚಿ ತಾಳ ತಟ್ಟುತ್ತಾ ಭಜನೆ ಮಾಡುತ್ತಿದ್ದರು"[೨]. ಹೀಗೆ ಸಂತೋಷವಾಗಿದ್ದಾರೆ ಎಂದು ಕಂಡು ಬಂದರೂ ಕೂಡ ಸ್ತ್ರೀಯರ ಅಂತರಂಗದ ಭಾವನೆ ಸ್ಪಷ್ಟವಾಗಿ ಅರ್ಥವಾಗುತ್ತಿಲ್ಲ. ಆ ಮನೆಯ ಸಂಪ್ರದಾಯ, ಕಟ್ಟು ಕಟ್ಟಳೆಗಳಿಗೆ ಎಲ್ಲಾ ಸ್ತ್ರೀ ಮನಸ್ಸು ಒಪ್ಪಿಕೊಳ್ಳುತ್ತಿತ್ತೊ ಇಲ್ವೋ. ಅದನ್ನು ತಿಳಿದುಕೊಳ್ಳುವಂತಹ ಶ್ರೀಮಂತ ಮನಸ್ಸು ಅಲ್ಲಿಯ ಗಂಡಸರಿಗಿರಲಿಲ್ಲ. ಹಾಗಾಗಿ "ಒಟ್ಟಿಗೆ ಬಾಳುತ್ತಿದ್ದ ಆ ಮನೆಗಳಲ್ಲಿ ಮನೆಯ ಒಂದಲ್ಲ ಒಂದು ಮೂಲೆಯಲ್ಲಿ ಒಂದಲ್ಲ ಒಂದು ಜನ ಕಣ್ಣೊರಸಿಕೊಳ್ಳುತ್ತ ನಿಲ್ಲುವುದೂ ಸಾಮಾನ್ಯವಾಗಿತ್ತು"[೩].

ಹೀಗೆ ಶ್ರೀಮಂತ-ಬಡವ, ಹೆಂಗಸರು-ಗಂಡಸರು ಇದ್ದಂತಹ ಊರಲ್ಲಿ ಬಹಳ ಹಿಂದೆ ಒಂದು ಸರ್ಕಸ್ಸು, ಒಂದು ನಾಟಕ ಕಂಪೆನಿ ಬಂದಿತ್ತು ಎಂದು ಹೇಳುತ್ತಿದ್ದರು. ಆದರೆ ಅದನ್ನ ಎಷ್ಟು ಸ್ತ್ರೀಯರು ನೋಡಿದ್ದಾರೆ ಎಂಬುದು ಯಾರಿಗೂ ಗೊತ್ತಿಲ್ಲ. ಯಾಕೆಂದರೆ ಆಗ ಸಂಪ್ರದಾಯ ಮನೆತನದ ಹೆಣ್ಣುಮಕ್ಕಳು ಅಂತಹ ಒಂದು ಕಾರ್ಯಕ್ರಮಗಳಿಗೆ ಹೋಗುವ ಪದ್ಧತಿ ಇರಲಿಲ್ಲ. ಆದರೆ ಕೆಲವು ವರ್ಷಗಳಿಂದ ಆರು ತಿಂಗಳಿಗೆ ಒಂದು ಸಲ ಟೆಂಟ್ ಬರುತ್ತಿತ್ತು. ಅಂದಿನಿಂದ ಸ್ತ್ರೀಯರ ಸ್ಥಿತಿ ಸ್ವಲ್ಪ ಸುಧಾರಿಸಿದಂತೆ ಕಾಣುತ್ತಿತ್ತು ಅಷ್ಟೆ. "ಯಾಕೆಂದರೆ ಆ ಸಿನಿಮಾಗಳನ್ನು ನೋಡಲು ಅವರು ಗಂಡಸರನ್ನೇ ಅವಲಂಬಿಸಿರಬೇಕಾಗಿತ್ತು. ಗಂಡಸರು ಎಲ್ಲಾದರೂ ಪ್ರಸನ್ನರಾದರೆ ಅವರನ್ನು ಸಿನಿಮಾಕ್ಕೆ ಒಯ್ಯುತ್ತಿದ್ದರು. ತಾವಾಗಿ ಹೋಗುವುದನ್ನು ಸ್ವತಃ ಹೆಂಗಸರೇ ಒಪ್ಪುತ್ತಿರಲಿಲ್ಲವಾಗಿ ಗಂಡು ಬಲವಿಲ್ಲದೆ ರಸ್ತೆಗಿಳಿಯುವುದನ್ನು ಅವರು ಕಲ್ಪಿಸಿಕೊಳ್ಳಲಾರರು ಕೂಡ, ಗಂಡಸರು ಅವರನ್ನು ಕರೆದುಕೊಂಡು ಹೋಗಿ ಟಿಕೇಟ್ ತೆಗೆಸಿಕೊಟ್ಟು, ಹೆಂಗಸರ ಗೇಟಿನ ಬಳಿ ಟಿಕೇಟ್‌ಗಳನ್ನು ಹರಿಸಿ, ಮುಚ್ಚಟೆಯಾಗಿ ಕೂರಿಸಿ ಸಿನೆಮಾ ಮುಗಿದ ಮೇಲೆ ವಾಪಾಸು ಕರೆದುಕೊಂಡು ಬರುತ್ತಿದ್ದರು.

ಹಾಗೆಂತ ಮುಂದಿನ ಸೀಟಿನಲ್ಲಿ ಚಾಪೆಯ ಮೇಲೆ ಕುಳಿತುಕೊಳ್ಳುವ ಕೊರಗ-ಕೂಸಾಳು ಹೆಂಗಸರೆಲ್ಲ ಸ್ವತಃ ಯಾರ ಎಗ್ಗಿಲ್ಲದೆ ಬಂದು ಕೂತು ಸಿನೆಮಾ ನೋಡುತ್ತ ಬಿಸಾತಿಲ್ಲದೆ ನಕ್ಕು-ಅತ್ತು ಎದ್ದು ಹೋಗುತ್ತಿರಲಿಲ್ಲವೆ? ಎಂಬ ಪ್ರಶ್ನೆ ಕೇಳಿದರೆ 'ಅವೇ? ಲಂಗು ಲಗಾಮು ಇಲ್ಲದವು!' ಎಂಬೊಂದು ಸಸಾರದ ಮಾತು ಬಂದೀತು"[೪]. ಇಲ್ಲೆಲ್ಲಾ ನೋಡಿದರೆ ಹೆಂಗಸರು ಕೂಡ ಸ್ವತಂತ್ರವಾಗಿ ಬದುಕುವುದನ್ನು ಇಷ್ಟಪಡುತ್ತಿರಲಿಲ್ಲವೇ ಅಥವಾ ಹಾಗೇ ಬದುಕುವುದಕ್ಕೆ ಧೈರ್ಯ ಇರಲಿಲ್ಲವೋ ಗೊತ್ತಾಗುವುದಿಲ್ಲ. ಒಟ್ಟಿನಲ್ಲಿ ಕೊರಗ ಕೂಸಾಳು ಹೆಂಗಸರಿಗಿದ್ದಷ್ಟೂ ಧೈರ್ಯ, ಸ್ವಾತಂತ್ರ್ಯ ಶ್ರೀಮಂತ, ಸಂಪ್ರದಾಯ ಮನೆತನದ ಹೆಣ್ಣು ಮಕ್ಕಳಿಗೆ ಇರಲಿಲ್ಲ. ಹಾಗಾಗಿ ಮನೆಯಿಂದ ರಸ್ತೆಗೆ ಇಳಿಬೇಕಾದರೆ ಅವರಿಗೆ ಗಂಡಸಿನ ಅಗತ್ಯ ಬೇಕಾಗಿತ್ತು.

ಹೀಗೆ ಇದ್ದ ಊರಿನ ಹೆಂಗಸರ ಸ್ಥಿತಿ ಸುಧಾರಿಸಿದ್ದು ಬೊಂಬಾಯಿಗೆ ಓಡಿಹೋದ ಗುಲಾಬಿಯ ದತ್ತು ಮಗ ಚಂದ್ರಪ್ಪ ಟಾಕೀಸು ಕಟ್ಟಿಸಿದ ನಂತರ. ಗುಲಾಬಿಗೆ ತನ್ನ ಊರಲ್ಲಿ ಏನಾದರೂ ಸುಧಾರಣೆ ತರಬೇಕೆಂದು ಬಯಸಿ ಟಾಕೀಸು ಕಟ್ಟಿಸುವುದಕ್ಕೆ ಮಗನಿಗೆ ಹೇಳಿದ್ದರಿಂದ ಟಾಕೀಸು ನಿರ್ಮಾಣಗೊಳ್ಳುತ್ತದೆ. ಅಂದಿನಿಂದ ಮಹಿಳೆಯರ ಸ್ಥಿತಿಗತಿಯಲ್ಲಿ ಬದಲಾವಣೆಯಾಯಿತು. ಕೆಲವರು ಆರ್ಥಿಕವಾಗಿ ಸ್ವಾವಲಂಬಿಗಳಾದರು. ಗುಲಾಬಿ ಬೊಂಬಾಯಿಗೆ ಮಗನ ಬಳಿಗೆ ಹೋಗಿ ಶ್ರೀಮಂತೆಯಾದರೆ, ಸೂಲಗಿತ್ತಿ ಲಿಲ್ಲೀಬಾಯಿ ಟಾಕೀಸು ನಿರ್ಮಾಣಗೊಂಡ ನಂತರ ಆರ್ಥಿಕವಾಗಿ ಸ್ವಾವಲಂಬಿಯಾದಳು.

ಲಿಲ್ಲೀಬಾಯಿಗೆ ಮೊದಲಿಂದಲೂ ಬೇಗನೇ ಶ್ರೀಮಂತೆಯಾಗಬೇಕೆಂಬ ಆಸೆ. ಆದರೆ ಅವಳ ಗಂಡ ಕಲಾಯಿ ನಾಯಕ. ಅವನು ದುಡ್ಡು ಮಾಡುವುದರಲ್ಲಿ ಹಿಂದೆ. ಜನರು ಕೊಟ್ಟಿದ್ದಷ್ಟನ್ನೇ ತೆಗೆದುಕೊಳ್ಳುತ್ತಿದ್ದ. ಹೀಗಾಗಿ ಅಷ್ಟೇನೂ ದುಡ್ಡು ಆಗುತ್ತಿರಲಿಲ್ಲ. ಹಾಗಾಗಿ ಲಿಲ್ಲೀಬಾಯಿ ಬೇರೆಯವರ ಬಗ್ಗೆ ಹೇಳಿ ಈತನನ್ನು ಸಸಾರ ಮಾಡುತ್ತಾಳೆ. ಗಂಡನ ಬಗ್ಗೆ ಅಪಹಾಸ್ಯ ಮಾಡುತ್ತಾಳೆ.

"ತನ್ನ ಗಂಡ ಬುರ್ನಾಸು ಅಂತಾಯಿತಲ್ಲ. ಎಷ್ಟು ಬಾಣಂತನ ಮಾಡಿದರೆ ಏನು? ಅದರ ದುಡ್ಡನ್ನೆಲ್ಲ ಸಂಸಾರಕ್ಕೆ ಹಾಕಬೇಕೆಂದರೆ! ಹೆಣ್ಣು ಹೆಂಗಸಿನ ಸಂಪಾದನೆ ಮೇಲೆ ತನ್ನ ಸಂಸಾರ ನಿಲ್ಲಬೇಕಾಯಿತೆ? ಅಂತೆಲ್ಲ ದಿನವೂ ಅವನೆದುರು, ಅವನನ್ನು ಉದ್ದೇಶಿಸದೆಯೇ ಹೇಳುತ್ತ 'ಇದು ಕಲಿ ಊರು. ಇಲ್ಲೇ ಇದ್ದರೆ ಬರ್ಕತ್ತಿಲ್ಲ. ಒಂದಷ್ಟು ಸಮಯ ಎಲ್ಲಾದರೂ ಹೋಗಬೇಕು. ಮತ್ತೆ ಬರಬೇಕು ಎಲ್ಲ ಒಳ್ಳೆಯದಾಗುತ್ತದೆ' ಎಂಬ ತಾತ್ಪರ್ಯಕ್ಕೆ ಬಂದು ಮುಟ್ಟಿಕೊಳ್ಳುತ್ತಿದ್ದಳು. ಸ್ವಲ್ಪ ಆಚೆ ಈಚೆ ಮಾಡುವುದನ್ನೂ ಕಲಿಯಬೇಕು ಎಂದು ಗಂಡನಿಗೆ ಹರಾಮ ಖೋರತನವನ್ನು ಬೋಧಿಸಲು ಯತ್ನಿಸಿದಳು"[೫]. ಹೀಗಾಗಿ ಗಂಡ ಬೊಂಬಾಯಿಗೆ ಓಡಿಹೋಗುತ್ತಾನೆ. ಹೀಗೆ ಲಿಲ್ಲೀಬಾಯಿ ಶ್ರೀಮಂತೆಯಾಗಬೇಕೆಂದು ಆಸೆಪಟ್ಟರೂ ಆ

ಊರಲ್ಲಿ ಏನೂ ಇರಲಿಲ್ಲ. ಹೀಗೆ ಇದ್ದಾಗ ಊರಲ್ಲಿ ಟಾಕೀಸು ನಿರ್ಮಾಣಗೊಂಡಿತು. ಅಂದಿನಿಂದ ಲಿಲ್ಲೀಬಾಯಿ ಹೆಂಗಸರ ಗೇಟ್‌ಕೀಪರ್ ಆಗಿ ಕೆಲಸ ಮಾಡುತ್ತಾಳೆ. ಅಂದಿನಿಂದ ಆಕೆ ಸೂಲಗಿತ್ತಿ ಕೆಲಸದ ಜೊತೆ ಗೇಟ್‌ಕೀಪರ್ ಕೆಲಸ ಕೂಡ ಮಾಡಿ ದುಡ್ಡು ಸಂಪಾದನೆ ಮಾಡುತ್ತಿದ್ದಳು. ಕೊನೆಗೆ ಬಾಣಂತಿತನದ ಕೆಲಸ ಜುಜುಬಿ ಎಂದು ಮಾಡಿ, ಆ ಕೆಲಸವನ್ನು ಬಿಟ್ಟಳು.

ಟಾಕೀಸಿಗೆ ಹೊಸ ಸಿನಿಮಾ ಬಂದರೆ ಅದನ್ನ ಮರುದಿನವೇ ಹೇಗಿತ್ತು?. ಎಂಬುದನ್ನು ರಂಗರಾಯರ ಮನೆಗೆ ಬಂದು ವಿವರಿಸುತ್ತಿದ್ದಳು. ಲಿಲ್ಲೀಬಾಯಿ ಬಂದಳೆಂದರೆ ಮನೆಯ ಹೆಂಗಸರು, ಮಕ್ಕಳು ಎಲ್ಲರೂ ಬಂದು ಆಕೆಯ ಮಾತುಗಳನ್ನು ಆಲಿಸುತ್ತಿದ್ದರು. ಅಂದಿನಿಂದ ಆಕೆಗೆ ಉಪಚಾರ ಕೂಡ ಜೋರಾಯಿತು. ಆದರೆ ಊರಿನ ಶ್ರೀಮಂತರ ಮನೆಯ ಸ್ತ್ರೀಯರು ಸಿನಿಮಾಕ್ಕೆ ಬರುತ್ತಿರಲಿಲ್ಲ. ಎಲ್ಲಿಯಾದರೂ ಬಂದುಬಿಟ್ಟರೆ ಮರುದಿನವೇ ಲಿಲ್ಲೀಬಾಯಿ ಬಂದು "ಅಮ್ಮ, ಓ ಅಮ್ಮ, ನಿನ್ನೆ ಇಂಥವರು ಸಿನಿಮಾಕ್ಕೆ ಬಂದದ್ದಲ್ಲವ? ಅತ್ತೆ ಸೊಸೆ ಇಬ್ಬರೂ? ಛೆ! ಸಂತಸಖೂ ಸಿನೆಮಾ. ನೋಡುತ್ತ ನೋಡುತ್ತ ಅತ್ತೆಯೂ ಮರಕಿದ್ದು, ಸೊಸೆಯೂ ಮರಕಿದ್ದು. ನಾನು ಸಿನೆಮಾವ! ಕಾಣುವುದನ್ನು ಬಿಟ್ಟು ಕಡೆಗೆ ಈ ಸಿನೆಮಾ ಕಾಣುತ್ತ ಕುಳಿತದ್ದಲ್ಲವೆ!"[1] ಎಂಬುದಾಗಿ ಹೇಳುತ್ತಾಳೆ. ಅದನ್ನ ಕೇಳಿದ ಇನ್ನೊಂದು ಮನೆ ಹೆಂಗಸರು ಅಂಥವರೇ ಬಂದಿರಬೇಕಾದರೆ ಅದು ನೋಡುವಂತಿರಬಹುದು ಎಂದು ತಿಳಿದು "ಮನೆಯ ಗಂಡಸರ ಹತ್ತಿರ .... 'ಇಂಥವರ ಮನೆಯವರೂ ಬಂದಿದ್ದರಂತೆ ... ಕೆಟ್ಟದು ಏನೂ ಇಲ್ಲವಂತೆ. ಮರಕಿ ಮರಕಿ ಇಟ್ಟರಂತೆ...?- ಇತ್ಯಾದಿ ಹೇಳಿ ಅಪ್ಪಣೆ ಕೇಳಲು ಸುಲಭವಾಗುತ್ತದೆ. ಸಾಮಾನ್ಯವಾಗಿ ಪೋಸ್ಟರನ್ನು ಕಂಡು ಇದು ತಮ್ಮ ಮನೆ ಹೆಂಗಸರು ನೋಡಲು ಹೇಳಿಸಿದ್ದೋ ಅಲ್ಲವೋ? ಎಂದು ತೀರ್ಮಾನಿಸುವ, 'ಹೆಂಗಸರಿಗೆಲ್ಲ ಸಿನೆಮವ! ಮತ್ತೇನಲ್ಲವ! ಎಂದು ಒಮ್ಮೆ ದೊಡ್ಡಸ್ವರ ತೆಗೆದು ಅವರ ಸದ್ದಡಗಿಸಬಲ್ಲಂಥ ಗಂಡಸರೂ ಇಂತಹ ಅರ್ಜಿ ಬಂದಾಗ ಗಮನಿಸುತ್ತಾರೆ. ಅಂತಹ ದೊಡ್ಡವರ ಮನೆಯವರೇ ಅಷ್ಟು ಅಳಬೇಕಾದರೆ ಅದರಲ್ಲಿ ಹೆಂಗಸರು ಕಾಣಬಾರದಂತಹ ದೃಶ್ಯಗಳು ಇರಲಿಕ್ಕಿಲ್ಲವೆಂದು ಲೆಕ್ಕ ಹಾಕಿ ಒಪ್ಪಿಗೆ ಕೊಡುತ್ತಾರೆ"[2] ಹಾಗೇ ಗೇಟಿನಲ್ಲಿ ಲಿಲ್ಲೀಬಾಯಿಯೇ ಇರುವುದರಿಂದ ಹೋಗಿ ಕೂರಿಸಬೇಕಾಗಿರಲಿಲ್ಲ. ಹಾಗೇ ಕರೆದುಕೊಂಡು ಹೋಗಬೇಕಿರಲಿಲ್ಲ. ಹೆಂಗಸರೇ ಧೈರ್ಯವಾಗಿ ರಸ್ತೆಗಿಳಿಯುತ್ತಿದ್ದರು. ಹೀಗೆ ಪ್ರೇಕ್ಷಕಿಯರ ಸಂಖ್ಯೆಯನ್ನು ಹೆಚ್ಚಿಸಿದ ಲಿಲ್ಲೀಬಾಯಿ ಇನ್ನೊಂದು ವಿದ್ಯೆಯನ್ನು ಕೂಡ ಕಲಿಯುತ್ತಾಳೆ. "ಎರಡು ಟಿಕೆಟಿಗೆ ನಾಲ್ಕು ಜನರನ್ನು ಬಿಡಲು ಹಾಗೂ ಒಬ್ಬರ ನಂತರ ಒಬ್ಬರನ್ನು ಬೇಗ ಬೇಗ ನೂಕಿ ಬಿಡುವುದನ್ನು. ಅಷ್ಟೇ ಅಲ್ಲ ಆ ಇಬ್ಬರಿಗೆ ಕೊಡಬೇಕಾದ ಟಿಕೆಟಿನ ಅರ್ಧ ಹಣವನ್ನು ಸಿನೆಮಾ ಸುರುವಾದ ಮೇಲೆ ಅವರು ಕುಳಿತಲ್ಲಿಗೇ ಬಂದು ಕತ್ತಲಲ್ಲಿ ಬಳಚಿ ಕೀಸಿಕೊಂಡು ಸೀರೆ ನೆರಿಗೆಯ ಅಂಬಡೆಯೊಳಗೆ

ಸಿಕ್ಕಿಸಿಕೊಳ್ಳುವುದನ್ನು[೬೮]. ಹೀಗೆ ಮನೆಯ ಗಂಡಸರು ಜಾಸ್ತಿ ದುಡ್ಡು ಕೇಳಿದರೆ ಬೈಯುತ್ತಿದ್ದರು. ಮನೆಯಲ್ಲಿ ಮಕ್ಕಳ ಕಣ್ಣು ತಪ್ಪಿಸಿ ಬರುವುದು ಕೂಡ ಕಷ್ಟವಾಗಿದ್ದಂತಹ ಸಂದರ್ಭದಲ್ಲಿ ಟಿಕೇಟು ಕಡಿಮೆ ತೆಗೆದುಕೊಂಡು ಲಿಲ್ಲೀಬಾಯಿಗೇ ಸ್ವಲ್ಪ ದುಡ್ಡು ಕೊಟ್ಟು ಸಿನೆಮಾ ನೋಡಿ ಬರುವುದು ರೂಢಿಯಾಯಿತು. ಇದರಿಂದ ಲಿಲ್ಲೀಬಾಯಿಗೂ ಲಾಭವಾಯಿತು. ಹೀಗೇ ದಿನ ಸರಿದಾಗ ಲಿಲ್ಲೀಬಾಯಿ ದಿನಚರಿಯಲ್ಲಿ ಬದಲಾವಣೆ ಆಯಿತು. 'ಬೆಟ್ಟಿನಷ್ಟಗಲದ ಅಂಚಿನ ಮಗ್ಗದ ಸೀರೆ ಉಡುತ್ತಿದ್ದವಳು ಅದನ್ನು ಬಿಟ್ಟು ಮೆತ್ತಗಿನ ವಾಯಿಲ್ ಸೀರೆಗಳನ್ನು ಖರೀದಿಸಿದಳು. 'ಟಾಕೀಸಿನೊಳಗೆ ಸೆಕೆಯಲ್ಲವೆ? ಮಗ್ಗದ ಸೀರೆಯುಟ್ಟು ಮೈಯಲ್ಲ ಬೆಂದು ಮುದ್ದೆ' ಎಂದು ಯಾಕೆ ಏನೂ ಎಂದು ಯಾರೂ ಕೇಳದಿದ್ದರೂ ಹೇಳುವಳು. ಒರಟು ಸೀರೆ ಈಗ ಉಡಲಿಕ್ಕೆ ಮಾತ್ರ ಗಂಡ ಅಂತಹ ಕಲಾಯಿ ನಾಯಕನಾದರೂ ತನ್ನ ಮನೆಯ ಪಾತ್ರಗಳೆಲ್ಲ ಒಟ್ಟೆ ಕಲಾಯಿಯೂ ಇಲ್ಲ. ಎನ್ನುತ್ತ ಹೊಸತಾಗಿ ಊರಿಗೆ ಬಂದಿದ್ದ ಸ್ಟೀಲಿನ ಎರಡು ಪಾತ್ರೆಗಳನ್ನು ಕೊಂಡಳು. ಕಿವಿಯಲ್ಲಿ ಒಂದು ಜೊತೆ ಹೊಸ ಕುಡುಕುಗಳು ಬಂದವು. ಮೀನು ಪೇಟೆಗೆ ಹೋಗುವುದು ಸಾಮಾನ್ಯವಾಯಿತು. ಒಗೆಯುವ ಕಲ್ಲು ಸರಿ ಇಲ್ಲವೆಂದು ಕಷ್ಟ ಪಡುತ್ತಿದ್ದವಳು ಮನೆ ಹಿಂಬದಿಯಲ್ಲಿ ಮೊಣಕಾಲೆತ್ತರಕ್ಕೆ ಒಗೆಯುವ ಕಲ್ಲನ್ನು ಹಾಕಿಸಿಕೊಂಡು ಒತ್ತಿನಲ್ಲಿ ಎರಡು ಬಾಳೆ ಕುರಲಿಗಳನ್ನು ನೆಟ್ಟಳು. ಕಲ್ಲು ಹಾಕಿಸಿದ ದಿನ ಎದುರು ಸಿಕ್ಕವರೊಡನೆ 'ಏನೇ ಆಗಲಿ, ಒಂದು ಒಗೆಯುವ ಕಲ್ಲು ಹಾಕಿಸಿಕೊಂಡೆ' ಎಂದು ಸುಖಿಸಿದಳು[೬೯]. ಹೀಗೆ ಲಿಲ್ಲೀಬಾಯಿ ಆರ್ಥಿಕವಾಗಿ ಸ್ವಾವಲಂಬಿಯಾಗಿ ಬದುಕುವುದಕ್ಕೆ ತೊಡಗುತ್ತಾಳೆ. ಹೀಗೆ ಇರುವಾಗ ಒಂದು ದಿನ ಗುಲಾಬಿ ಸತ್ತು ಹೋದ ಸುದ್ದಿ ಬಂತು. ಆಮೇಲೆ ಒಮ್ಮೆ ಚಂದ್ರಪ್ಪ ಬಂದು ಇಲ್ಲಿ ವ್ಯವಹಾರ ನೋಡಿಕೊಳ್ಳುವುದಕ್ಕೆ ಕಷ್ಟವಾಗುತ್ತದೆ. ಎಂದು ಹೇಳಿ ಟಾಕೀಸನ್ನು ಬೇರೆ ಊರಿನವನಿಗೆ ಮಾರುತ್ತಾನೆ. ಆ ಮೇಲೆ ಲಿಲ್ಲೀಬಾಯಿಯ ಕೆಲಸ ಹೋಗುತ್ತದೆ. ಅಂದರೆ ಮೊದಲು ಹೆಂಗಸರಿಗೆ ಮನೆಯಲ್ಲಿಯೇ ಹೆರಿಗೆ ಆಗುತ್ತಿತ್ತು. ಆದರೆ ಈಗ ಆಸ್ಪತ್ರೆ ನಿರ್ಮಾಣಗೊಂಡ ನಂತರ ಹೆರಿಗೆಗೆ ಆಸ್ಪತ್ರೆಗೆ ಹೋಗತೊಡಗಿದರು. ನಂತರ ಮನೆಗೆ ಬಂದ ಬಾಣಂತಿ–ಮಗುವನ್ನು ಲಿಲ್ಲೀಬಾಯಿ ನೋಡಿಕೊಳ್ಳುತ್ತಿದ್ದಳು. ಆಸ್ಪತ್ರೆಯಲ್ಲಿ ಹೆರಿಗೆ ಮಾಡಿಸಿಕೊಂಡು ಹೆಚ್ಚಿನವರು ಯಾರಿಗೂ ತಿಳಿಯದಂತೆ ಮಕ್ಕಳಾಗದಂತೆ ಆಪರೇಷನ್ ಮಾಡಿಕೊಂಡೇ ಮನೆಗೆ ಬರುತ್ತಿದ್ದರು. ಹಾಗಾಗಿ ಬಾಣಂತಿ ಸಾಕುವುದು ಕೂಡ ಲಿಲ್ಲೀಬಾಯಿಗೆ ಕಡಿಮೆಯಾಗತೊಡಗಿತ್ತು.

ಆದರೆ ಊರಿನಲ್ಲಿ ದೊಡ್ಡವರ ಮನೆ ಹೆಂಗಸರು ಬಾರಿ ಸುಧಾರಿಸಿದ್ದರು. 'ಈಗ ಟಾಕೀಸಿನಲ್ಲಿ ಲಿಲ್ಲೀಬಾಯಿ ಇಲ್ಲದಿದ್ದರೇನಾಯಿತು? ಊರಿನ ಹೆಂಗಸರಿಗೆ ಮುಂಚಿನಷ್ಟು ಭೀತಿಯೂ ಇಲ್ಲ. ಮುಂಚಿನಷ್ಟು ಖಾಲಿ ಕೈಯೂ ಇಲ್ಲ. ಸಂಜೆ ಸಿನೆಮಾಕ್ಕೆ ಹೋಗುತ್ತೇವೆ. "ಗಂಡಸರುಗದರಿದರೆ 'ಅದೇನು ಒಂದು

ಸಿನೆಮಾ ನೋಡಲು ನಾಲಾಯಿಕಾದವೇ? ಒಳ್ಳೇಕತೆ! ನೀವು ಹೇಳಿದ ಹಾಗೆ. ಕೇಳುತ್ತಿದ್ದರೆ ಹೇಗೂ ಕುಣೀಸೀರಿ'– ಎಂದು ತುರುಬಿಗೆ ಮುಳ್ಳು ಕುತ್ತುತ್ತಾ ಉತ್ತರ ಕೊಡಲು ತಯಾರಾಗಿದ್ದಾರೆ. ದುಡ್ಡು? ಪೂರಾ ಸತ್ಯಂಭಟ್ಟರಾದರೆ ಸತ್ತು ನಿಗರಿಹೋದೆವು ಎನ್ನುತ್ತ ಮೂರು ಜನ ಹೊರಟರೆ ನಾಲ್ಕು ಜನ ಹೋಗುತ್ತೇವೆಂದು ಜಾಸ್ತಿ ವಸೂಲಿ ಮಾಡುವುದನ್ನು ಮತ್ತು ಹೆಚ್ಚಿಗಿರುವುದನ್ನು ಕೂಡಿಟ್ಟು ಮತ್ತೆ ಯಾವತ್ತಾದರೂ ಉಪಯೋಗಿಸುವುದನ್ನು ಕಲಿತಿದ್ದಾರೆ"[೧೦]. ಹೀಗೆ ಶಾಂತವಾಗಿದ್ದ ಊರಿನಲ್ಲಿ ಟಾಕೀಸು ಬಂದು ಅಲೆಯನ್ನು ಎಬ್ಬಿಸಿ ಗುಲಾಬಿ ಹೊರಟು ಹೋದರೂ ಆಕೆಯ ಹೆಸರು ಮಾತ್ರ ಉಳಿಯಿತು. ಊರಿನ ದೊಡ್ಡವರ ಮನೆ ಹೆಂಗಸರು ಧೈರ್ಯವಾಗಿ ಮನೆಯಿಂದ ಹೊರಬರತೊಡಗಿದ್ದರು. ಶ್ರೀಮಂತೆಯಾಗಬೇಕೆಂಬ ಆಸೆಪಟ್ಟ ಲಿಲ್ಲೀಬಾಯಿ ಅರ್ಥಿಕವಾಗಿ ಸ್ವಾವಲಂಬಿಯಾಗಿ ಬದುಕತೊಡಗಿದಳು. ಹೀಗೆ ಆ ಊರಿನ ಎಲ್ಲಾ ಸ್ತ್ರೀಯರಲ್ಲೂ ಒಂದಲ್ಲ ಒಂದು ರೀತಿಯಲ್ಲಿ ಸುಧಾರಣೆ ಕಂಡು ಬಂದಿದ್ದನ್ನು ಕಾಣಬಹುದು.

ಟಾಕೀಸು ಹುಟ್ಟು ಹಾಕಿದ ಬದಲಾವಣೆ ಇಲ್ಲಿ ಬಹಳ ಮುಖ್ಯವಾದುದು. ಊರಿನ ಎಲ್ಲಾ ವರ್ಗದ ಜನರನ್ನು ಒಂದು ಕಡೆ ಬಂದು ಸೇರುವಂತೆ ಮಾಡುವಲ್ಲಿ ಟಾಕೀಸಿನ ಪಾತ್ರ ಹಿರಿದಾದುದು. ಹೆಣ್ಣಿಗೆ ಒಂದು ಪರಿವರ್ತನೆಯಿಂದ ಬಿಡುಗಡೆ ಒದಗಿತ್ತು. ಗಂಡಿನ ಮನಸ್ಸುಗಳಲ್ಲಿ ಕೂಡ ಬದಲಾವಣೆ ಬಂದಿತು. ಕಾಲ ಕ್ರಮೇಣ ಹೆಣ್ಣು ಸ್ವತಂತ್ರವಾಗಿ ಬೀದಿಗೆ ಇಳಿಯುವುದಕ್ಕೆ ಅವಕಾಶವಾಯಿತು ಎನ್ನುವುದು ಒಂದು ದೊಡ್ಡ ರೂಪಕ. ಆಧುನಿಕ ಸಂಪ್ರದಾಯವಾಗಿ ಮನೆಯ ಕಡೆಯಿಂದ, ಹೊಸತನದ ಟಾಕೀಸಿನ ಕಡೆಗೆ ಆರಂಭವಾದ ಪಯಣ. ಬದಲಾವಣೆಯ ಸಂಕೇತ. ಬದಲಾಣೆಯಲ್ಲಿ ಲಿಲ್ಲೀಬಾಯಿಯಂತವರು ಒಂದು ಕಾರಣವಾಗುತ್ತಾರೆ ಮತ್ತು ಬದಲಾವಣೆಯ ಪ್ರಯೋಜನ ಪಡೆಯುತ್ತಾರೆ. ಹೆರಿಗೆಯ ಪ್ರಕ್ರಿಯೆ ಆಸ್ಪತ್ರೆಗೆ ವರ್ಗಾವಣೆಯಾಗುವುದರ ಮೂಲಕ ಮಕ್ಕಳಾಗದಂತೆ ಶಸ್ತ್ರ ಚಿಕಿತ್ಸೆಗೆ ತಮ್ಮನ್ನು ಒಡ್ಡಿಕೊಂಡು, ಮಗುವಿಗೆ ಜನ್ಮಕೊಡುವ ತನ್ನ ಕೆಲಸವನ್ನು ಪ್ರಜ್ಞಾಪೂರ್ವಕವಾಗಿ ಆಯ್ಕೆಗೆ ಇಟ್ಟುಕೊಳ್ಳುತ್ತಾಳೆ. ಹೆಣ್ಣಿನಿಂದ ನಿರಂತರ ಹೆರಿಸಿಕೊಳ್ಳುವ ಪುರುಷ ದೌರ್ಜನ್ಯಕ್ಕೆ ಇದು ಕೊನೆಯಾಗುತ್ತದೆ. ಹೊಸತನ, ಆಧುನಿಕತೆಗೆ ಇಲ್ಲಿನ ಸ್ತ್ರೀಯರು ತಮ್ಮನ್ನು ತೆರೆದುಕೊಳ್ಳುತ್ತಾರೆ.

# ಸಂದರ್ಭಸೂಚಿ

೧. ಅಲೆಗಳಲ್ಲಿ ಅಂತರಂಗ : ವೈದೇಹಿ ; ಪು: ೩೧೮; ೨೦೦೫

೨. ಅಲೆಗಳಲ್ಲಿ ಅಂತರಂಗ : ವೈದೇಹಿ ; ಪು: ೩೧೮; ೨೦೦೫

೩. ಅಲೆಗಳಲ್ಲಿ ಅಂತರಂಗ : ವೈದೇಹಿ ; ಪು: ೩೧೮; ೨೦೦೫

೪. ಅಲೆಗಳಲ್ಲಿ ಅಂತರಂಗ : ವೈದೇಹಿ ; ಪು: ೩೧೯; ೨೦೦೫

೫. ಅಲೆಗಳಲ್ಲಿ ಅಂತರಂಗ : ವೈದೇಹಿ ; ಪು: ೩೨೧; ೨೦೦೫

೬. ಅಲೆಗಳಲ್ಲಿ ಅಂತರಂಗ : ವೈದೇಹಿ ; ಪು: ೩೨೪; ೨೦೦೫

೭. ಅಲೆಗಳಲ್ಲಿ ಅಂತರಂಗ : ವೈದೇಹಿ ; ಪು: ೩೨೪; ೨೦೦೫

೮. ಅಲೆಗಳಲ್ಲಿ ಅಂತರಂಗ : ವೈದೇಹಿ ; ಪು: ೩೨೪; ೨೦೦೫

೯. ಅಲೆಗಳಲ್ಲಿ ಅಂತರಂಗ : ವೈದೇಹಿ ; ಪು: ೩೨೫; ೨೦೦೫

೧೦. ಅಲೆಗಳಲ್ಲಿ ಅಂತರಂಗ : ವೈದೇಹಿ ; ಪು: ೩೩೦; ೨೦೦೫

# ೭. ಉಪಸಂಹಾರ

'ವೈದೇಹಿಯವರ ಸಣ್ಣ ಕಥೆಗಳಲ್ಲಿ ಸ್ತ್ರೀಲೋಕ' ಎಂಬ ನನ್ನ ಈ ಸಂಶೋಧನಾ ಪ್ರಬಂಧದಲ್ಲಿ ವೈದೇಹಿಯವರ ಕಥೆಗಳ ವಿಶ್ಲೇಷಣೆಯ ಆಧಾರದಿಂದ ಕಂಡುಕೊಂಡ ವಿವರಗಳನ್ನು ದಾಖಲಿಸಲಾಗಿದೆ. ಸಣ್ಣ ಕಥಾ ಪ್ರಕಾರವನ್ನು ರೂಢಿಸಿಕೊಂಡಿರುವ ವೈದೇಹಿಯವರು ಯಾವುದೇ ಬಗೆಯಲ್ಲಿ ತನ್ನನ್ನು ತಾನು ಘೋಷಿತ 'ಮಹಿಳಾವಾದಿ' ಎಂಬ ಚೌಕಟ್ಟನ್ನು ಇಟ್ಟುಕೊಳ್ಳದೇ, ಇದ್ದರೂ ಕೂಡಾ ಅವರ ಕಥೆಗಳು ತೆರೆದಿಡುವ 'ಸ್ತ್ರೀಲೋಕ' ಕುತೂಹಲದಾಯಕವಾದಂತಹುದು ಮತ್ತು ವಿಚಾರಶೀಲ ನೆಲೆಗಟ್ಟಿನದು. ಮಹಿಳಾವಾದದ ಸಿದ್ಧಾಂತಗಳನ್ನು ಎಲ್ಲೂ ನೇರವಾಗಿ ಪತಿಪಾದಿಸದೇ ಇದ್ದರೂ, ಒಂದೊಂದು ಸ್ತ್ರೀ ಪಾತ್ರಗಳ ಅಂತರಂಗದ ಅನಾವರಣ ಅಂತಿಮವಾಗಿ ಹೆಣ್ಣಿನ ಒಳದನಿಗಳನ್ನು ತೆರೆದಿಡುತ್ತದೆ.

ಹಲವು ಸ್ತರಗಳ, ಹಲವು ವಿಭಿನ್ನ ನೆಲೆಗಳಿಂದ ಬರುವ ಹೆಣ್ಣು ಪಾತ್ರಗಳು ಕಥೆಗಳ ಒಳಗೆ ತಮ್ಮದೇ ಆದ ಒಂದು ಲೋಕವನ್ನ ಸೃಷ್ಟಿಸಿಕೊಳ್ಳುತ್ತವೆ. ಹೀಗೆ ಕಟ್ಟಿಕೊಳ್ಳುವ ಹೆಣ್ಣಿನ ಲೋಕ ಅದು ತೀರಾ ಸಾಂಪ್ರದಾಯಿಕ ಬಗೆಯದ್ದಿರಬಹುದು ಅಥವಾ ನವಕಾಲದ ಬದಲಾವಣೆಗೆ ಎದುರಾಗಿ ಆಧುನಿಕ ನೆಲೆಯದ್ದಿರಬಹುದು. ಅಲ್ಲಿ ಒಂದು ಹೆಣ್ಣಿನ ಲೋಕ ಸೃಷ್ಟಿಯಾಗಿರುತ್ತದೆ. ಇಂತಹ ಹೆಣ್ಣಿನ ಲೋಕದ ಬಹು ನೆಲೆಗಳನ್ನು ಈ ಸಂಶೋಧನಾ ಪ್ರಬಂಧದಲ್ಲಿ ಅಧ್ಯಯನಕ್ಕೆ ಒಳಪಡಿಸಲಾಗಿದೆ.

ಕೌಟುಂಬಿಕ ಬದುಕು ಹೆಣ್ಣಿನ ಪಾಲಿಗೆ ಹೇಗಿದೆ? ಎನ್ನುವುದನ್ನು ವೈದೇಹಿಯವರ ಕಥೆಗಳಲ್ಲಿ ಚಿತ್ರಣಗೊಂಡ ಕೌಟುಂಬಿಕ ಬದುಕು ಎಂಬ ಅಧ್ಯಾಯದಲ್ಲಿ ವಿಭಕ್ತ ಮತ್ತು ಅವಿಭಕ್ತ ಕುಟುಂಬಗಳಲ್ಲಿ ಹೆಣ್ಣು ಹೇಗೆ ತನ್ನ ಪಾತ್ರಗಳನ್ನು ನಿರ್ವಹಿಸಲ್ಪಡುತ್ತಾಳೆ ಎಂಬುದನ್ನು ನೋಡಲಾಗಿದೆ. ಕುಟುಂಬದ ಒಳಗೆ ರೂಪಿಸಲ್ಪಟ್ಟ ನಿಯಮಗಳು ಹೇಗೆ ಹೆಣ್ಣಿಗೆ ನಿರ್ಬಂಧವನ್ನುಂಟು ಮಾಡಿದೆ ಎಂಬುದನ್ನು ಅಧ್ಯಯನಕ್ಕೆ ಒಳಪಡಿಸಲಾಗಿದೆ.

ವೈದೇಹಿಯವರ ಕಥೆಗಳಲ್ಲಿ ಸ್ತ್ರೀ ಪಾತ್ರಗಳು ಹಲವು ಬಗೆಯಲ್ಲಿ ಕಾಣಿಸಿಕೊಳ್ಳುತ್ತದೆ. ಈ ಹಲವು ಆಕೃತಿಗಳನ್ನು ವಿವರವಾಗಿ ನೋಡುವುದಕ್ಕಾಗಿ 'ವೈದೇಹಿಯವರ ಕಥೆಗಳಲ್ಲಿ ಕಾಣಿಸಿಕೊಳ್ಳುವ ಸ್ತ್ರೀ ಆಕೃತಿಗಳು' ಎಂಬ ಅಧ್ಯಾಯವನ್ನು ಮಾಡಲಾಗಿದೆ. ಇದರಲ್ಲಿ ಕಥೆಗಳ ಒಳಗೆ ಕಾಣಿಸಿಕೊಳ್ಳುವ ಸಂಪ್ರದಾಯಕ್ಕೆ ಬದ್ಧವಾಗಿ ಬದುಕು ನಿರ್ವಹಿಸುವ ಹೆಣ್ಣಿನ ಜೊತೆಯಲ್ಲಿ ಸಾಂಪ್ರದಾಯಿಕ ಚೌಕಟ್ಟನ್ನು ಮೀರಿ ನಡೆದಾಟಿ ಹೊಸತನಕ್ಕೆ ಒಪ್ಪಿಕೊಂಡಿರುವವರು ಇದ್ದಾರೆ. ಅಂತಹ ಸಂದರ್ಭದಲ್ಲಿ ಹೆಣ್ಣು ಹೇಗೆ ತನ್ನನ್ನು ತಾನು ಪ್ರತಿರೋಧಕ್ಕೆ ಒಡ್ಡಿಕೊಂಡು ಸಮಾಜವನ್ನು, ತನ್ನ ಕುಟುಂಬವನ್ನು ಎದುರಿಸುತ್ತಾಳೆ ಎಂಬುದನ್ನು

ನೋಡಲಾಗಿದೆ. ಕುಟುಂಬದ ಒಳಗೆ ವಿವಿಧ ಕಾರಣಗಳಿಂದಾಗಿ ಶೋಷಣೆಗೆ ಒಳಪಟ್ಟ ಹೆಣ್ಣು ಕೆಲವೊಮ್ಮೆ ಬಹಿರಂಗವಾಗಿ, ಇನ್ನು ಕೆಲವೊಮ್ಮೆ ತನ್ನ ಅಂತರಂಗದಲ್ಲೇ ಪ್ರತಿರೋಧಿಸುವ ಪ್ರವೃತ್ತಿ ಕಾಣುತ್ತದೆ. ಶೋಷಣೆಯನ್ನು ಅನಿವಾರ್ಯ ಕಾರಣದಿಂದ ಒಪ್ಪಿಕೊಂಡಿರುವ ಮತ್ತು ಕೆಲವೊಮ್ಮೆ ಬಹಿರಂಗದಲ್ಲಿ ತೋರಿಸಲಾಗದಿದ್ದರೂ ತನ್ನೊಳಗೆ ಪ್ರತಿರೋಧವನ್ನು ತೋರಿಸುವ ಮಾದರಿಗಳಿವೆ.

ಸ್ತ್ರೀಯ ಅಂತರಂಗದ ಹಲವು ಸೂಕ್ಷ್ಮಗಳನ್ನು ತೆರೆದಿಡುವ ವೈದೇಹಿಯವರ ಕಥೆಗಳು ಹಲವಿವೆ. ಅಂತರಂಗದ ಚಿತ್ರಣ ಎಂದಾಗ ಅಲ್ಲಿ ಒಂದು ಕಡೆ ಈಗಾಗಲೇ ರೂಢಿಯಿಂದ ಬಂದಿರುವ ಸಂಪ್ರದಾಯವನ್ನು ಒಪ್ಪಿ ಪಾಲಿಸುವ ಮಾದರಿ ಒಂದೆಡೆಯಾದರೆ, ಸಾಂಪ್ರದಾಯಿಕ ಕುಟುಂಬ ವ್ಯವಸ್ಥೆಯ ಒಳಗೆ ಇದ್ದುಕೊಂಡೇ ಆ ಸಂಪ್ರದಾಯವನ್ನು ವಿರೋಧಿಸುವ ನೆಲೆಯ ಸ್ತ್ರೀ ಪಾತ್ರಗಳೂ ಇವೆ. ಈ ವಿರೋಧಕ್ಕೆ ಕಾರಣವಾಗಿರುವ ಸಂಗತಿಯೆಂದರೆ ಹೆಣ್ಣು ತನ್ನೊಳಗೆ ವೈಚಾರಿಕವಾಗಿ ಆಲೋಚಿಸುವ ಕ್ರಮ. ಈ ವೈಚಾರಿಕತೆ ಕೆಲವೊಮ್ಮೆ ಹೊರಗಿನ ಪ್ರಭಾವದಿಂದ ಬಂದರೆ, ಇನ್ನು ಕೆಲವೊಮ್ಮೆ ತನ್ನ ವರ್ತಮಾನದ ಸ್ಥಿತಿಯೇ ಅದನ್ನು ಮೀರುವುದಕ್ಕೆ ಪ್ರೇರೇಪಿಸುವ ಹಾಗೆ ಇರುತ್ತದೆ. ಸಂಪ್ರದಾಯವನ್ನು ಒಪ್ಪುವಾಗ ಸಹಜವಾಗಿ ಸಾಗುವ ಜೀವನ ವ್ಯವಸ್ಥೆಯು, ಪ್ರತಿರೋಧವನ್ನು ಸೇರಿಸಿದಾಗ ಕಷ್ಟಗಳನ್ನು ಎದುರಿಸಬೇಕಾಗುತ್ತದೆ. ಈ ಅಧ್ಯಯನದಲ್ಲಿ ಈ ಬಗೆಯ ಒಪ್ಪುವ ಮತ್ತು ಪ್ರತಿರೋಧದ ಸ್ವರೂಪವನ್ನು ಕಂಡುಕೊಳ್ಳುವ ಪ್ರಯತ್ನವನ್ನು ಮಾಡಲಾಗಿದೆ.

ಹೆಣ್ಣು ಕುಟುಂಬದೊಳಗೆ ಅಸಹಾಯಕಳಾಗಿರುವುದಕ್ಕೆ ಮುಖ್ಯ ಕಾರಣ ಆಕೆ ಆರ್ಥಿಕವಾಗಿ ಪರಾವಲಂಬಿಯಾಗಿರುವುದು. ವೈದೇಹಿಯವರ ಕಥೆಗಳು ಒಂದೆಡೆ ಇಂತಹ ಪರಾವಲಂಬಿ ಹೆಣ್ಣನ್ನು ಚಿತ್ರಿಸುತ್ತಲೇ, ಮತ್ತೊಂದೆಡೆ ಸ್ತ್ರೀ ಪರಿವರ್ತನೆಯ ಚಿತ್ರಣವನ್ನು ದಾಖಲಿಸುತ್ತದೆ. ಈ ಅಧ್ಯಯನದಲ್ಲಿ ಹೆಣ್ಣು ಹೇಗೆ ಆರ್ಥಿಕ ಸ್ವಾವಲಂಬನೆಯ ಕಡೆಗೆ ಚಲಿಸುತ್ತಾಳೆ ಎಂಬುದನ್ನು ಕಂಡುಕೊಳ್ಳಲಾಗಿದೆ. ಕುಟುಂಬದೊಳಗಿನ ಸೀಮಿತ ಬದುಕನ್ನು ಮೀರಿ, ತನ್ನನ್ನು ತಾನು ಆರ್ಥಿಕವಾಗಿ ಸ್ವಾವಲಂಬನೆಯನ್ನು ಬೆಳೆಸುವ ನಿಟ್ಟಿನಲ್ಲಿ ತನ್ನ ಹೆಜ್ಜೆಗಳನ್ನು ಇಡುತ್ತಾಳೆ. ಒಟ್ಟಿನಲ್ಲಿ ವೈದೇಹಿಯವರ ಕಥೆಗಳು ಹಲವು ಸಂಕೀರ್ಣ ಸ್ವರೂಪದ ಬದುಕನ್ನು ಕಟ್ಟಿಕೊಡುವಂತಿದ್ದು, ಅವುಗಳನ್ನು ಆಯ್ಕೆ ಮಾಡಿದ ಕೆಲವು ಕಥೆಗಳನ್ನು ಪ್ರಾತಿನಿಧಿಕವಾಗಿ ಈ ಅಧ್ಯಯನಕ್ಕೆ ಬಳಸಿಕೊಳ್ಳಲಾಗಿದೆ. ಆ ಪ್ರಾತಿನಿಧಿಕ ಕಥೆಗಳ ಆಧಾರದಲ್ಲಿ ಬಿಂಬಿತವಾಗುವ ಸ್ತ್ರೀ ಲೋಕವನ್ನು ಅಧ್ಯಯನದ ಆಧಾರದಲ್ಲಿ ಈ ಸಂಶೋಧನಾ ಸಂಪ್ರಬಂಧವನ್ನು ಮಂಡಿಸಲಾಗಿದೆ.

# ೮. ಪರಾಮರ್ಶನ ಕೃತಿಗಳು


೧. ಅಶೋಕ.ಟಿ.ಪಿ. : ವೈದೇಹಿಯವರ ಕಥೆಗಳು
ಕುಂದಾಪುರ ಕನ್ನಡ ಸಂಘ ಮತ್ತು
ಕುಂದಾಪುರ ತಾಲೂಕು ಕನ್ನಡ ಸಾಹಿತ್ಯ ಪರಿಷತ್
ಕುಂದಾಪುರ: ೧೯೯೫.

೨. ಅಶೋಕ ಟಿ.ಪಿ. (ಸಂ) : ವೈದೇಹಿ ವಾಚಿಕೆ
ನುಡಿ ಪುಸ್ತಕ,
ನಂ.೨೭, ೨೧ನೇ ಮುಖ್ಯರಸ್ತೆ, ಬಿ.ಡಿ.ಎ.
ಕಾಂಪ್ಲೆಕ್ಸ್ ಎದುರು,
ಬನಶಂಕರಿ ಎರಡನೇ ಹಂತ, ಬೆಂಗಳೂರು.

೩. ಅಮೂರ ಜಿ.ಎಸ್. : ಸಮಕಾಲೀನ ಕಥೆ ಕಾದಂಬರಿ ಹೊಸ ಪ್ರಯೋಗಗಳು
ಕನ್ನಡ ಸಾಹಿತ್ಯ ಪರಿಷತ್ತು: ಬೆಂಗಳೂರು, ೧೯೮೯.

೪. ಅಮೂರ ಜಿ.ಎಸ್.(ಸಂ) : ಅವಳ ಕತೆಗಳು
ಪ್ರಿಸಂ. ಬುಕ್ಸ್ ಪ್ರೈ.ಲಿ.
ಬನಶಂಕರಿ ಎರಡನೇ ಹಂತ, ಬೆಂಗಳೂರು.

೫. ಅಮರೇಶ ನುಗಡೋಣಿ (ಸಂ.) : ಕನ್ನಡ ಅಧ್ಯಯನ
ಸಂಪುಟ ೨೧-೨೩
ಪ್ರಸಾರಾಂಗ,
ಕನ್ನಡ ವಿ.ವಿ.ಹಂಪಿ - ೨೦೦೭.

೬. ಇಂದಿರಾ.ಆರ್. : ಮಹಿಳೆ, ಸಮಾಜ ಮತ್ತು ಸಂಸ್ಕೃತಿ ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ ಹಂಪಿ.

೭. ಇಂದಿರಾ.ಆರ್ : ಸ್ತ್ರೀವಾದಿ ದಿಕ್ಸೂಚಿ
ಸಮತಾ ಅಧ್ಯಯನ ಕೇಂದ್ರ,
ಮೈಸೂರು- ೧೯೯೫.

೮. ಕಲಬುರ್ಗಿ ಎಂ.ಎಂ. : ಕನ್ನಡ ಸಂಶೋಧನಾ ಶಾಸ್ತ್ರ
ಸೌಜನ್ಯ ಪ್ರಕಾಶನ, ಧಾರವಾಡ, ೧೯೯೨

೯. ಕುವೆಂಪು : ನೆನಪಿನ ದೋಣಿಯಲ್ಲಿ
ಕುವೆಂಪು ವಿದ್ಯಾವರ್ಧಕ ಟ್ರಸ್ಟ್, ಮೈಸೂರು, ೧೯೮೦.

೧೦. ಕುವೆಂಪು : ಸನ್ಯಾಸಿ ಮತ್ತು ಇತರ ಕತೆಗಳು
ಉದಯರವಿ ಪ್ರಕಾಶನ, ಮೈಸೂರು ೧೯೮೩.

೧೧.ಡಾ. ಗಾಯತ್ರಿ ನಾವಡ : ಕರಾವಳಿ ಜನಪದ ಸಾಹಿತ್ಯದಲ್ಲಿ ಸ್ತ್ರೀವಾದಿ ನೆಲೆಗಳು
ರಾಷ್ಟ್ರಕವಿ ಗೋವಿಂದ ಪೈ ಸಂಶೋಧನ ಕೇಂದ್ರ
ಸಿರಿ ಪ್ರಕಾಶನ, ಉಡುಪಿ, ಹೊಸಪೇಟೆ.

೧೨.ಗಿರಿಡ್ಡಿ ಗೋವಿಂದ ರಾಜ : ಸಣ್ಣಕಥೆಯ ಹೊಸ ಒಲವುಗಳು
ಸಾಹಿತ್ಯ ಭಂಡಾರ, ಹುಬ್ಬಳ್ಳಿ, ೧೯೯೫.

೧೩.ಗಿರಿಡ್ಡಿ ಗೋವಿಂದ ರಾಜ : ಕನ್ನಡ ಕಥಾ ಸಂಕಲನ
ವಿಶ್ವ ಕನ್ನಡ ಸಮ್ಮೇಳನ, ಬೆಂಗಳೂರು.

೧೪.ನೇಮಿಚಂದ್ರ : ಮತ್ತೆ ಬರೆದ ಕಥೆಗಳು
ಶ್ರೀ ಪ್ರಕಾಶನ, ಬೆಂಗಳೂರು, ೧೯೯೧.

೧೫.ದಿವಾಕರ್ ಎಚ್.ಎಸ್. (ಸಂ) : ಶತಮಾನದ ಸಣ್ಣಕತೆಗಳು
ಪ್ರಿಸಂ. ಬುಕ್ಸ್. ಪ್ರೈ.ಲಿ.
ಬುಲ್ ಟೆಂಪಲ್ ರಸ್ತೆ, ಬಸವನಗುಡಿ, ಬೆಂಗಳೂರು.

೧೬.ಬರಗೂರು ರಾಮಚಂದ್ರಪ್ಪ : ಸಂಸ್ಕೃತಿ: ಶ್ರಮ ಮತ್ತು ಸೃಜನಶೀಲತೆ
(ಗೋರೆಗಾಂವ್ ವಿಚಾರ ಭಾರತಿ
ಸಮ್ಮೇಳನದ ಅಧ್ಯಕ್ಷೀಯ ಭಾಷಣ, ೧೯೯೮)

೧೭.ಬಿ.ಜನಾರ್ಧನ ಭಟ್ (ಸಂ.) : ದಕ್ಷಿಣ ಕನ್ನಡದ ಶತಮಾನದ ಕತೆಗಳು
ಕರ್ನಾಟಕ ಸಂಘ, ಪುತ್ತೂರು
ದಕ್ಷಿಣ ಕನ್ನಡ- ೨೦೦೩.

೧೮.ಮನು ಚಕ್ರವರ್ತಿ ಎನ್. : ಮಾಧ್ಯಮ ಮಾರ್ಗ
ಅಕ್ಷರ ಪ್ರಕಾಶನ
ಹೆಗ್ಗೋಡು ಸಾಗರ- ೨೦೧೦.

೧೯.ಡಾ.ಕೆ.ರವೀಂದ್ರನಾಥ್ : ಅಧ್ಯಾಯನದ ವಿಧಿ ವಿಧಾನಗಳು
ಪ್ರಸಾರಾಂಗ
ಕನ್ನಡ ವಿ.ವಿ.ಹಂಪಿ- ೨೦೦೮.

೨೦. ರಹಮತ್ ತರೀಕೆರೆ : ಸಾಹಿತ್ಯ ವಿಮರ್ಶೆ ೧೯೯೧
ಕರ್ನಾಟಕ ಸಾಹಿತ್ಯ ಅಕಾಡೆಮಿ: ಬೆಂಗಳೂರು.

೨೧. ಸುಬ್ಬಣ್ಣ ಕೆ.ವಿ. : ವೈದೇಹಿ ಅವರ ಆಯ್ದ ಕಥೆಗಳು
ಅಕ್ಷರ ಪ್ರಕಾಶನ,
ಹೆಗ್ಗೋಡು (ಸಾಗರ) ಕರ್ನಾಟಕ.

೨೨. ಡಾ.ಸಬಿಹಾ ಭೂಮಿಗೌಡ (ಸಂ.) : ದಕ್ಷಿಣ ಕನ್ನಡ ಜಿಲ್ಲೆಯ ಮಕ್ಕಳ ಸಾಹಿತ್ಯ
ಡಾ.ಶಿವರಾಮ ಕಾರಂತ ಪೀಠ,
ಮಂಗಳೂರು ವಿ.ವಿ. ೨೦೦೧.

೨೩. ಡಾ.ಸುರೇಖಾ ಕೆ. : ವೈದೇಹಿಯರ ಸಾಹಿತ್ಯ ಒಂದು ಅಧ್ಯಯನ
ಪಾಂಚಜನ್ಯ ಪಬ್ಲಿಕೇಷನ್ಸ್
ನಂ.೪೨೦/೨೮, ೬-೭ನೇ ಕ್ರಾಸ್ ನಡುವೆ
ಅಮರ ಜ್ಯೋತಿನಗರ, ಬೆಂಗಳೂರು.

೨೪. ಸುಮಿತ್ರಬಾಯಿ ಬಿ.ಎನ್. : ಸ್ತ್ರೀವಾದ
ಕರ್ನಾಟಕ ಸಾಹಿತ್ಯ ಅಕಾಡೆಮಿ
ಕನ್ನಡ ಭವನ
ಬೆಂಗಳೂರು- ೨೦೦೯.

೨೫. ಶಿವರುದ್ರಪ್ಪ ಜೆ.ಎಸ್ : ಕನ್ನಡ ಸಾಹಿತ್ಯ ಸಂದರ್ಭ
ಕನ್ನಡ ಸಾಹಿತ್ಯ ಅಕಾಡೆಮಿ:
ಬೆಂಗಳೂರು ೧೯೯೦.

೨೬. ವೈದೇಹಿ : ಮೇಜು ಮತ್ತು ಬಡಗಿ
ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ.

<u>ಪತ್ರಿಕೆಗಳು</u>

ಉದಯವಾಣಿ

ವಿಜಯಕರ್ನಾಟಕ

ಪ್ರಜಾವಾಣಿ.